KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ನವೆಂಬರ್ ೧೯, ೨೦೦೯ (ಕಾರ್ತೀಕ ೨೮, ಶಕ ವರ್ಷ ೧೯೩೧) | ಸಂಚಿಕೆ ೪೬ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಉಪ ನಿರ್ದೇಶಕರ ಕಾರ್ಯಾಲಯ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ**

**ಸೈನಿಕ ವಿಶ್ರಾಂತಿ ಗೃಹ ಕಟ್ಟಡ, ಊರ್ವ ಸ್ಟೋರ್ಸ್, ಅಶೋಕ ನಗರ ಅಂಚೆ, ಮಂಗಳೂರು – 575006**

**ವಿಷಯ:** ಉಪ ನಿರ್ದೇಶಕರು ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಂಗಳೂರು ಇವರ ಕಾರ್ಯಾಲಯದ ಒಂದು ಡೀಜಲ್ ಮಹೀಂದ್ರ & ಮಹೀಂದ್ರ ಜೀಪಿನ ಬಹಿರಂಗ ಹರಾಜು ಪ್ರಕಟಣೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ/142/ಶವಾನೀ/2000 ದಿನಾಂಕ: 05.01.2001.

2. ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರ ಪತ್ರ ಸಂಖ್ಯೆ ಇಲ್ಲ ದಿನಾಂಕ 26.10.2009.

ಮೇಲ್ಕಾಣಿಸಿದ ವಿಷಯ ಹಾಗೂ ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಕೆಳಗೆ ಕಾಣಿಸಿದ ವಾಹನವು ಸರ್ಕಾರಿ ಸೇವೆಗೆ ಅನುಪಯುಕ್ತವಾಗಿದ್ದು, ಮೇಲ್ಕಾಣಿಸಿದ ಕಛೇರಿಯ ಆವರಣದಲ್ಲಿ ನಿಲ್ಲಿಸಲಾಗಿದೆ. ಅದನ್ನು ಈಗ ಸದ್ಯ ಇದ್ದ ಸ್ಥಿತಿಯಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ: 27.11.2009 ರಂದು ಅಪರಾಹ್ನ 11.00 ಗಂಟೆಗೆ ಸಾರ್ವಜನಿಕ ಬಹಿರಂಗ ಹರಾಜು ಮಾಡಲಾಗುವುದು.

| ಕ್ರ. ಸಂ. | ವಾಹನ ನೋಂದಣಿ ಸಂಖ್ಯೆ | ವಾಹನ ಖರೀದಿಸಿದ ವರ್ಷ | ಹರಾಜಿನ ದಿನಾಂಕ | ವಾಹನ ನಿಲ್ಲಿಸಿದ ಸ್ಥಳ ಹಾಗೂ ಹರಾಜು ಮಾಡುವ ಸ್ಥಳ | ಹರಾಜು ಮಾಡುವ ಅಧಿಕಾರಿಯ ಹೆಸರು |
|---|---|---|---|---|---|
| 1 | ಸಿ.ಎ.ಜಿ 522 | 1983 | 27.11.2009 | ಉಪ ನಿರ್ದೇಶಕರ ಕಾರ್ಯಾಲಯ ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಸೈನಿಕ ವಿಶ್ರಾಂತಿ ಗೃಹ ಕಟ್ಟಡ, ಅಶೋಕ ನಗರ ಅಂಚೆ, ಮಂಗಳೂರು – 575006 | ಉಪ ನಿರ್ದೇಶಕರು |

1) ಹರಾಜನ್ನು ಕೆಳಗೆ ಸಹಿ ಮಾಡಿರುವ ಅಥವಾ ಅವರಿಂದ ಅನುಮತಿ ಪಡೆದ ಅಧಿಕಾರಿಗಳ ಸಮಕ್ಷಮದಲ್ಲಿ ನಡೆಸಲಾಗುವುದು.

2) ಹರಾಜಿನಲ್ಲಿ ಭಾಗವಹಿಸುವವರು ಮುಂಗಡವಾಗಿ ರೂ. 2,000/– (ಎರಡು ಸಾವಿರದ ರೂಪಾಯಿಗಳು ಮಾತ್ರ) ಇಡುಗಂಟು ಹಣವನ್ನು ಈ ಕೆಳಗೆ ಸಹಿ ಮಾಡಿದವರ ಹೆಸರಿನಲ್ಲಿ ಬ್ಯಾಂಕ್ ಡಿ.ಡಿ. ಪಡೆದು ತಮ್ಮ ಹೆಸರನ್ನು ನೊಂದಾಯಿಸಿಕೊಳ್ಳಬೇಕು. ಹಾಗೂ ಅಂಚೆ ಮೂಲಕ ಕೂಡ ಕಳುಹಿಸಬಹುದು.

3) ಕನಿಷ್ಟ ಬಿಡ್ಡು ರೂ. 20,000/– ಆಗಿರುತ್ತದೆ. ಇದಕ್ಕಿಂತ ಕಡಿಮೆ ಬೇಡಿಕೆಯನ್ನು ತಿರಸ್ಕರಿಸಲಾಗುವುದು.

4) ಹರಾಜು ಸಮಯದಲ್ಲಿ ಬೇಡಿಕೆಯ ಮೊತ್ತವನ್ನು ಒಪ್ಪಲು ಅಥವಾ ತಿರಸ್ಕರಿಸಲು ಮತ್ತು ಯಾವುದೇ ಕಾರಣ ನೀಡದೇ ಹರಾಜನ್ನು ಮುಂದುವರಿಸಲು ಅಥವಾ ರದ್ದುಗೊಳಿಸಲು ಅಧಿಕಾರ ಈ ಕೆಳಗೆ ಸಹಿ ಮಾಡಿದವರಿಗೆ ಇರುತ್ತದೆ.

5) ಹೆಚ್ಚಿನ ಮೊತ್ತ ಬೇಡಿಕೆ ಸಲ್ಲಿಸಿದವರ ಹರಾಜನ್ನು ಒಪ್ಪಿಕೊಳ್ಳಲಾಗುವುದು. ಅವರು ಹರಾಜಿನ 50% ಹಣವನ್ನು ಹರಾಜಿನ ದಿನದಂದು ಸಂದಾಯ ಮಾಡಿ ರಶೀದಿ ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಇಡುಗಂಟನ್ನು ಮುಟ್ಟುಗೋಲು ಹಾಕಲಾಗುವುದು.

6) ಇನ್ನೂ ಬಾಕಿ ಕಟ್ಟಬೇಕಾದ 50% ಹರಾಜಿನ ಮೊತ್ತವನ್ನು ಹರಾಜಿನ ದಿನದಿಂದ 07 ದಿನದೊಳಗೆ ಸಂದಾಯ ಮಾಡಿ ವಾಹನ ಯಾವ ಸ್ಥಿತಿಯಲ್ಲಿದೆಯೋ ಅದೇ ಸ್ಥಿತಿಯಲ್ಲಿ ಪಡೆಯತಕ್ಕದ್ದು.

7) ವಾಹನ ಪಡೆದುಕೊಂಡು ಹೋಗುವಾಗ ಮಾರ್ಗ ಮಧ್ಯ ಏನಾದರೂ ತೊಂದರೆಯಾದರೆ ಅವರೇ ಜವಾಬ್ದಾರರು.

8) ವಾಹನದ ವರ್ಗಾವಣೆ, ವಿಮೆ, ಮತ್ತು ವಾಹನ ತೆರಿಗೆ ಯಾವುದೇ ದಾಖಲಾತಿಗಳಿಗೆ ತಗಲುವ ವೆಚ್ಚವನ್ನು ಬೇಡಿಕೆದಾರರೇ ಪ್ರಾದೇಶಿಕ ಸಾರಿಗೆ ಕಚೇರಿಯಲ್ಲಿ ಹಣ ಸಂದಾಯ ಮಾಡಿ ವರ್ಗಾಯಿಸತಕ್ಕದ್ದು.

9) ವಾಹನದ ಬಹಿರಂಗ ಹರಾಜಾದ ಮೊತ್ತಕ್ಕೆ ನಿಯಮಾನುಸಾರ ಮಾರಾಟ ತೆರಿಗೆ ಮತ್ತು ಇತರ ತೆರಿಗೆಗಳನ್ನು ವಿಧಿಸಲಾಗುವುದು.

10) ಹರಾಜು ಮಾಡಲು ಉದ್ದೇಶಿಸಿದ ವಾಹನವನ್ನು ಸೈನಿಕ ವಿಶ್ರಾಂತಿ ಗೃಹ ಕಟ್ಟಡದ ನೆಲ ಮಾಳಿಗೆಯಲ್ಲಿ ನಿಲ್ಲಿಸಲಾಗಿದೆ. ರಜೆ ದಿನಗಳನ್ನು ಹೊರತುಪಡಿಸಿ ಕಛೇರಿ ವೇಳೆಯಲ್ಲಿ ಪರಿಶೀಲಿಸಬಹುದು.

11) ಬಹಿರಂಗ ಹರಾಜನ್ನು ಕಛೇರಿಯ ಆವರಣದಲ್ಲಿ ದಿನಾಂಕ: 27.11.2009 ರಂದು ಅಪರಾಹ್ನ 11.00 ಗಂಟೆಗೆ ನಡೆಸಲಾಗುವುದು.

12) ಹರಾಜು ಮುಗಿದ ಮೇಲೆ ಯಶಸ್ವಿಯಾದ ಬೇಡಿಕೆದಾರನ ಹೊರತಾಗಿ ಉಳಿದೆಲ್ಲ ಬೇಡಿಕೆದಾರರ ಇಡುಗಂಟು ಹಣವನ್ನು ಚೆಕ್ ಮೂಲಕ ವಾಪಸ್ ಮಾಡಲಾಗುವುದು.

13) ಯಾವುದೇ ತರಹದ ವಿವಾದಕ್ಕೆ ಅಧಿಕೃತ ಅಧಿಕಾರಿಗಳ ನಿರ್ಣಯವೇ ಕೊನೆಯದು ಮತ್ತು ಬಂಧನಕಾರಿಯಾಗಿರುತ್ತದೆ.

ಉಪ ನಿರ್ದೇಶಕರು

ಪಿ.ಆರ್. 935 ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಮಂಗಳೂರು

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ

**ಅಧಿಸೂಚನೆ ಸಂಖ್ಯೆ: 4/2009, ದಿನಾಂಕ: 30ನೇ ಅಕ್ಟೋಬರ್ 2009**

**ವಿಷಯ:** ಚಿತ್ರದುರ್ಗ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸುತ್ತಿರುವ ಕುರಿತು.

**ಉಲ್ಲೇಖ:** ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂ:ಎಲ್‌ಸಿಎ–1/220/96 {Uniform Staff Pattern} ದಿ:15.09.2009.

**ಅರ್ಜಿಗಳನ್ನು ಸ್ವೀಕರಿಸಲು ಕಡೆಯ ದಿನಾಂಕ: 05.12.2009 ಸಂಜೆ 5.00 ಗಂಟೆ**

ಖಾಲಿ ಹುದ್ದೆಗಳ ಸಂಖ್ಯೆ {Provisional} ಹಾಗೂ ವರ್ಗೀಕರಣ

**ಶೀಘ್ರಲಿಪಿಗಾರರು: 4 ಹುದ್ದೆಗಳು**

| | ಸಾ.ಅ | ಪ.ಜಾತಿ | 3ಎ | ಒಟ್ಟು |
|---|---|---|---|---|
| ಗ್ರಾ.ಅ. | 2 | 1* | – | 3 |
| ಇತರೆ | – | – | 1 | 1 |
| **ಒಟ್ಟು** | **2** | **1*** | **1** | **4** |

**ವೇತನ ಶ್ರೇಣಿ: *ಬ್ಯಾಕ್‌ಲಾಗ್ ಹುದ್ದೆ**

1) ಶೀಘ್ರಲಿಪಿಗಾರರು: ರೂ.7275–175–7800–200–8600–225–9500–250–10500–300–12300–350–13350 ಹಾಗೂ ನಿಯಮಾನುಸಾರ ಇತರೆ ಭತ್ಯೆಗಳು

**ವಯೋಮಿತಿ:** ಅರ್ಜಿ ಸಲ್ಲಿಸಬೇಕಾದ ಕಡೆಯ ದಿನಾಂಕಕ್ಕೆ ಕನಿಷ್ಟ : 18 ವರ್ಷಗಳು

**ಗರಿಷ್ಠ:** ಅ) ಪರಿಶಿಷ್ಟ ಜಾತಿಗೆ ಸೇರಿದ ಅಭ್ಯರ್ಥಿಗಳಿಗೆ 40 ವರ್ಷಗಳು

ಆ) ಹಿಂದುಳಿದ ವರ್ಗದ ಪ್ರವರ್ಗ 3–ಎ ಗೆ ಸೇರಿದ ಅಭ್ಯರ್ಥಿಗಳಿಗೆ 38 ವರ್ಷಗಳು

ಇ) ಅಂಗವಿಕಲರಿಗೆ ಹಾಗೂ ವಿಧವಾ ಮಹಿಳೆಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆ

ಈ) ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷಗಳು

**ಸೂಚನೆ:** ಪರಿಶಿಷ್ಟ ಜಾತಿ, 3–ಎ ಹಾಗೂ ಗ್ರಾಮೀಣ ವರ್ಗೀಕರಣದ ಮೀಸಲಾತಿಯಡಿ ಆಯ್ಕೆ ಬಯಸುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರ ಪಡೆದಿರಬೇಕು.

**ವಿದ್ಯಾರ್ಹತೆ:**

1) ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2) ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಶೀಘ್ರಲಿಪಿ ಪ್ರೌಢ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
3) ಸಾರ್ವಜನಿಕ ಶಿಕ್ಷಣ ಇಲಾಖೆ ವತಿಯಿಂದ ನಡೆಸುವ ಕನ್ನಡ ಹಾಗೂ ಆಂಗ್ಲ ಬೆರಳಚ್ಚು ಪ್ರೌಢ ದರ್ಜೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.

**ಆಯ್ಕೆ ವಿಧಾನ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮ ಹಾಗೂ ಅಧೀನ ನ್ಯಾಯಾಲಯಗಳ (ಲಿಪಿಕ ಹಾಗೂ ಇತರೆ ಹುದ್ದೆಗಳ ನೇಮಕಾತಿ) ನಿಯಮ 1982ರ ಹಾಗೂ 2007ರ (ತಿದ್ದುಪಡಿ) ನಿಯಮಗಳ ಮೇರೆಗೆ ಈ ಕೆಳಗಿನಂತೆ ಅರ್ಹತಾ ಪರೀಕ್ಷೆ ಅಥವಾ ಸ್ಪರ್ಧಾತ್ಮಕ ಪರೀಕ್ಷೆ ಹಾಗೂ ಸಂದರ್ಶನದ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

**ಶೀಘ್ರಲಿಪಿಗಾರರ ಹುದ್ದೆಗೆ:**

ಅ) ಅಭ್ಯರ್ಥಿಯು ನೇಮಕಾತಿ ಪ್ರಾಧಿಕಾರದಿಂದ ನಾಮನಿರ್ದೇಶಿಸಲ್ಪಟ್ಟ ಪರೀಕ್ಷಕರು ಪ್ರತಿ ನಿಮಿಷಕ್ಕೆ 120 ಪದಗಳ ವೇಗದಂತೆ ಐದು ನಿಮಿಷಗಳಲ್ಲಿ ನೀಡುವ ಉಕ್ತಲೇಖನವನ್ನು ಸುಮಾರು 45 ನಿಮಿಷಗಳಲ್ಲಿ ಲಿಪ್ಯಂತರಿಸತಕ್ಕದ್ದು.
ಆ) ಈ ಪರೀಕ್ಷೆಯು ಗರಿಷ್ಠ 100 ಅಂಕಗಳದ್ದಾಗಿದ್ದು ಪರೀಕ್ಷೆಯಲ್ಲಿ ಉತ್ತೀರ್ಣತೆಗೆ ಕನಿಷ್ಠ 50 ಅಂಕಗಳನ್ನು ಪಡೆಯತಕ್ಕದ್ದು.

**ಇತರೆ ನಿಬಂಧನೆಗಳು:**

1) ಸರ್ಕಾರಿ ನೌಕರರು ಅರ್ಜಿಯನ್ನು ಸಲ್ಲಿಸಬೇಕಾದ ಸಂದರ್ಭದಲ್ಲಿ ನೌಕರರು ಅರ್ಜಿ ಸಲ್ಲಿಸುವ ಅವಧಿಯಲ್ಲಿ ಹೊಂದಿದ ಹುದ್ದೆಯು ನೇಮಕಾತಿ ಪ್ರಾಧಿಕಾರದ ಮೂಲಕ ಅರ್ಜಿ ಸಲ್ಲಿಸತಕ್ಕದ್ದು.
2) ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ, ಗ್ರಾಮೀಣ, ಅಭ್ಯರ್ಥಿಗಳಿಂದ ನಿಗದಿತ ಸಂಖ್ಯೆಯಲ್ಲಿ ಅರ್ಜಿಗಳು ಬಾರದಿದ್ದಲ್ಲಿ ಆ ಹುದ್ದೆಗಳನ್ನು ಅದೇ ವರ್ಗೀಕರಣದ ಇತರೆ ಅಭ್ಯರ್ಥಿಗಳಿಂದ ತುಂಬಲಾಗುವುದು.
3) ಆಯ್ಕೆಯಾದ ಅಭ್ಯರ್ಥಿಗಳು ಕನಿಷ್ಠ ಎರಡು ವರ್ಷಗಳ ಅಥವಾ ಅಗತ್ಯವೆನಿಸಿದ ವಿಸ್ತೃತ ಪರಿವೀಕ್ಷಣಾ ಅವಧಿಗೆ ಒಳಪಡುವರು.
4) ಅಭ್ಯರ್ಥಿಗಳು ಯಾವುದೇ ಹುದ್ದೆಗೆ ತಮ್ಮ ಆಯ್ಕೆಗೆ ಯಾವುದೇ ರೀತಿಯ ಬಾಹ್ಯ ಒತ್ತಡವನ್ನು ತರತಕ್ಕದಲ್ಲ. ಹಾಗೆ ಕಂಡುಬಂದಲ್ಲಿ ಅಂಥವರ ಅಭ್ಯರ್ಥಿತ್ವವನ್ನು ಸಂಪೂರ್ಣವಾಗಿ ತಿರಸ್ಕರಿಸಲಾಗುವುದು.
5) ನಿಗದಿತ ನಮೂನೆಯಲ್ಲಿ ಬೆರಳಚ್ಚುಪಡಿಸಿ ನಂತರ ಭರ್ತಿ ಮಾಡಿದ ಅರ್ಜಿಗಳನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಇವರ ವಿಳಾಸಕ್ಕೆ ದಿ: 05.12.2009 ರ ಸಂಜೆ 5.00 ಗಂಟೆ ಒಳಗಾಗಿ ಅಥವಾ ಅದಕ್ಕೂ ಮುಂಚಿತವಾಗಿ ತಲುಪಿದ ಅರ್ಜಿಗಳನ್ನು ಮಾತ್ರ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದು. ತದನಂತರ ತಲುಪಿದ ಅರ್ಜಿಗಳನ್ನು ಒಟ್ಟಾರೆಯಾಗಿ ತಿರಸ್ಕರಿಸಲಾಗುವುದು.
6) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆಗೆ ಜನ್ಮ ದಿನಾಂಕ, ಸಾಮಾನ್ಯ ವಿದ್ಯಾರ್ಹತೆ, ತಾಂತ್ರಿಕ ವಿದ್ಯಾರ್ಹತೆ, ಶಾಲಾ ಮುಖ್ಯಸ್ಥರಿಂದ ಪಡೆದ ನಡತೆ ಪ್ರಮಾಣ ಪತ್ರ, ಅಂಕಪಟ್ಟಿ, ಜಾತಿ, ಮೀಸಲಾತಿ ಹಾಗೂ ನಡತೆ ಕುರಿತು ದಾಖಲಾತಿಗಳ ಸ್ವದೃಢೀಕೃತ ನಕಲುಗಳನ್ನು ಲಗತ್ತಿಸಕ್ಕದ್ದು. ಮೂಲ ದಾಖಲಾತಿಗಳನ್ನು ಯಾವುದೇ ಕಾರಣಕ್ಕೂ ಲಗತ್ತಿಸತಕ್ಕದ್ದಲ್ಲ.
7) ಅಭ್ಯರ್ಥಿಯು ವಾಸವಾಗಿರುವ ಸ್ಥಳದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದಿಂದ ಆರು ತಿಂಗಳುಗಳ ಒಳಗೆ ಪಡೆದ ಪ್ರಮಾಣ ಪತ್ರದ ಸ್ವದೃಢೀಕೃತ ನಕಲು ಪ್ರತಿಗಳನ್ನು ಲಗತ್ತಿಸತಕ್ಕದ್ದು ಮತ್ತು ಸ್ವ ವಿಳಾಸದ ಒಂದು ಲಕೋಟೆಯನ್ನು ರೂ.5–00 ಅಂಚೆ ಚೀಟಿ ಅಂಟಿಸಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು.
8) ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಹುದ್ದೆಗೆ ಅರ್ಜಿ ಸಲ್ಲಿಸಲು ಇಚ್ಛಿಸಿದಲ್ಲಿ ಪ್ರತಿ ಹುದ್ದೆಗೆ ಪ್ರತ್ಯೇಕ ಅರ್ಜಿ ಸಲ್ಲಿಸತಕ್ಕದ್ದು. ಹಾಗೂ ಲಕೋಟೆಯ ಮೇಲೆ ಅರ್ಜಿ ಸಲ್ಲಿಸಬಯಸುವ ಹುದ್ದೆಯ ಹೆಸರನ್ನು ನಿರ್ದಿಷ್ಟವಾಗಿ ನಮೂದಿಸತಕ್ಕದ್ದು.
9) ಅರ್ಜಿಯನ್ನು ಈ ಅಧಿಸೂಚನೆಗೆ ಲಗತ್ತಿಸಿದ ನಮೂನೆಯಲ್ಲಿರುವಂತೆ ಬೆರಳಚ್ಚುಪಡಿಸಿ ವಿವರಗಳನ್ನು ಪೂರ್ತಿಯಾಗಿ ಭರ್ತಿ ಮಾಡಿ ಅಭ್ಯರ್ಥಿಯ ಇತ್ತೀಚಿನ ಸ್ವದೃಢೀಕೃತ ಭಾವಚಿತ್ರವನ್ನು ಲಗತ್ತಿಸಿ ಕಳುಹಿಸತಕ್ಕದ್ದು.

ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ತಿರಸ್ಕೃತ ಅರ್ಜಿಗಳ ಬಗ್ಗೆ ಅಥವಾ ಸಂದರ್ಶನಕ್ಕೆ ಅನರ್ಹರಾದ ಬಗ್ಗೆ ಯಾವುದೇ ಪತ್ರ ವ್ಯವಹಾರ ಮಾಡಲಾಗುವುದಿಲ್ಲ.

ಸ್ಥಳ : ಚಿತ್ರದುರ್ಗ **ಎಂ.ಎ. ಶಶಿಕಲಾ**

ದಿನಾಂಕ: 30.10.2009 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ

**ಅರ್ಜಿ ನಮೂನೆ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ, ನ್ಯಾಯಾಂಗ ಘಟಕದಲ್ಲಿ ಅಧಿಸೂಚನೆ ಸಂಖ್ಯೆ: 4/09, ದಿನಾಂಕ: 30.10.2009 ಅಧಿಸೂಚನೆಯ ಮೇರೆಗೆ ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿಯನ್ನು ಸಲ್ಲಿಸಲಾಗಿದೆ.

| ಅಭ್ಯರ್ಥಿಯ ಇತ್ತೀಚಿನ ಸ್ವದೃಢೀಕೃತ ಭಾವಚಿತ್ರ |
|---|

ಇವರಿಗೆ

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ಬಿಡಿ ಅಕ್ಷರಗಳಲ್ಲಿ) | | | |
| 2 | ಅಭ್ಯರ್ಥಿಯ ತಂದೆ / ಗಂಡನ / ಪೋಷಕರ ಹೆಸರು ಮತ್ತು ವೃತ್ತಿ | | | |
| 3 | ಅಭ್ಯರ್ಥಿಯ ಪೂರ್ಣ ವಿಳಾಸ | | | |
| 4 | ಅಭ್ಯರ್ಥಿಯು, ಪುರುಷ / ಸ್ತ್ರೀ / ಅಂಗವಿಕಲ / ವಿಧವೆ / ವಿವಾಹಿತರೇ? | | | |
| 5 | ಅ) ಅಭ್ಯರ್ಥಿಯು ಹುಟ್ಟಿದ ದಿನಾಂಕ:<br>ಆ) ಅರ್ಜಿ ಸಲ್ಲಿಸಲು ಅಂತಿಮ ದಿನಾಂಕಕ್ಕೆ ವಯಸ್ಸು<br>ಇ) ಹುಟ್ಟಿದ ದಿನಾಂಕದ ಬಗ್ಗೆ ಸಲ್ಲಿಸಿದ ದೃಢೀಕರಣ ಪತ್ರ | | | |
| 6 | ಹುಟ್ಟಿದ ಸ್ಥಳ : ಅ) ಗ್ರಾಮ<br>ಆ) ಪಟ್ಟಣ<br>ಇ) ತಾಲ್ಲೂಕು<br>ಈ) ಜಿಲ್ಲೆ | | | |
| 7 | ಅಭ್ಯರ್ಥಿಯು ಯಾವ ಜಾತಿಗೆ ಸೇರಿದ್ದಾರೆ? ಪರಿಶಿಷ್ಟ ಜಾತಿ/ 3ಎ ಗೆ ಸೇರಿದ್ದ ಪಕ್ಷದಲ್ಲಿ ಹಾಗೂ ಯಾವುದೇ ಮೀಸಲಾತಿ ಬಯಸಿದ್ದಲ್ಲಿ ಸಕ್ಷಮ ಪ್ರಾಧಿಕಾರದಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರದ ಸ್ವದೃಢೀಕೃತ ದಾಖಲಾತಿ ಲಗತ್ತಿಸತಕ್ಕದ್ದು. | | | |
| 8 | ಗ್ರಾಮೀಣ ಅಭ್ಯರ್ಥಿಯೇ? ಹಾಗಿದ್ದಲ್ಲಿ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ. | | | |
| 9 | ವಿದ್ಯಾರ್ಹತೆ | ಉತ್ತೀರ್ಣತೆಯ ವರ್ಷ ಮತ್ತು ತಿಂಗಳು | ಗರಿಷ್ಠ ಅಂಕಗಳು | ಪಡೆದ ಅಂಕಗಳು |
| | 1. ಎಸ್.ಎಸ್.ಎಲ್.ಸಿ<br>2. ಕನ್ನಡ ಶೀಘ್ರಲಿಪಿ ಪ್ರೌಢ ದರ್ಜೆ<br>3. ಆಂಗ್ಲ ಶೀಘ್ರಲಿಪಿ ಪ್ರೌಢ ದರ್ಜೆ<br>4. ಕನ್ನಡ ಬೆರಳಚ್ಚು ಪ್ರೌಢ ದರ್ಜೆ<br>5. ಆಂಗ್ಲ ಬೆರಳಚ್ಚು ಪ್ರೌಢ ದರ್ಜೆ | | | |
| 10 | ಅಡಕಗಳು (ಲಗತ್ತಿಸಿದ ಸ್ವದೃಢೀಕೃತ ದಾಖಲಾತಿಗಳು) | | | |

*ಅನ್ವಯಿಸದೇ ಇರುವುದನ್ನು ಹೊಡೆದು ಹಾಕಿ

**ಅಭ್ಯರ್ಥಿಯ ಸ್ವಯಂ ಘೋಷಣೆ**

ಮೇಲ್ಕಂಡ ವಿವರಣೆಗಳು ಸತ್ಯವಾಗಿರುತ್ತವೆ ಹಾಗೂ ಸರಿಯಾಗಿರುತ್ತವೆ. ಮೇಲೆ ತಿಳಿಸಿದ ಮಾಹಿತಿಗಳು ಸುಳ್ಳು ಎಂದು ತಿಳಿದು ಬಂದಲ್ಲಿ ಕಾನೂನು ರೀತ್ಯಾ ಸೂಕ್ತ ಕ್ರಮ ಕೈಗೊಳ್ಳಬಹುದು ಎಂದು ಘೋಷಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ

ಪಿ.ಆರ್. 950

**ಪೊಲೀಸ್ ಇಲಾಖೆ**

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ನಂ.ಸಿ.ಟಿ.ಆರ್.ಎಸ್.1/08/2009–10, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009**

ಸಂಗ್ರಹಣಾ ಸಂಸ್ಥೆ:– ಪೊಲೀಸ್ ಮಹಾನಿರೀಕ್ಷಕರು/ ಆಯುಕ್ತರು ಸಂಚಾರ ಮತ್ತು ರಸ್ತೆ ಸುರಕ್ಷತೆ, ಬೆಂಗಳೂರು

ಯೋಜನೆ ವಿವರ:– ಸಂಚಾರ ಮತ್ತು ಸುರಕ್ಷತೆಯ ಅನುದಾನ 2009–10

ಪೊಲೀಸ್ ಇಲಾಖೆಗೆ ಅಗತ್ಯವಾಗಿ ಬೇಕಾಗಿರುವ 7 ಇಂಟರ್‌ಸೆಪ್ಟರ್ ವಾಹನಗಳನ್ನು ಸರಬರಾಜು ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ ನಿಯಮ 2000 ರ ಪ್ರಕಾರ ಮೊಹರು ಮಾಡಿರುವ ದರ ಪಟ್ಟಿಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ವಿವರ ಮತ್ತು ಷರತ್ತುಗಳನ್ನೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಗಳೊಂದಿಗೆ (ಸ್ಪೆಸಿಫಿಕೇಶನ್) ದಿನಾಂಕ: 30/11/2009 ರ ಸಾಯಂಕಾಲ 4 ಗಂಟೆಯೊಳಗಾಗಿ ಪೊಲೀಸ್ ಮಹಾ ನಿರೀಕ್ಷಕರು/ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ, ಬೆಂಗಳೂರು ರವರಿಗೆ ಟೆಂಡರ್ ಸಲ್ಲಿಸಬಹುದು.

ಟೆಂಡರ್‌ದಾರರು ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ 2 ಪ್ರತ್ಯೇಕ ಕವರ್‌ಗಳಲ್ಲಿ ಸಲ್ಲಿಸುವುದು ಕಡ್ಡಾಯವಾಗಿರುತ್ತದೆ. 1ನೇ ಕವರ್‌ನಲ್ಲಿ ಟೆಂಡರ್‌ದಾರರು ಅವರುಗಳು ಹೊಂದಿರುವ ಅನುಭವ, ಕಾರ್ಯದ ವಿಧಾನ, ವಾರ್ಷಿಕ ವಹಿವಾಟು, ಆರ್ಥಿಕತೆ, ಆದಾಯ ತೆರಿಗೆ ಮತ್ತು ವಾಣಿಜ್ಯ ತೆರಿಗೆ ಪಾವತಿಯ ಮಾಹಿತಿಯನ್ನು ಮತ್ತು ಇದರ ಜೊತೆಗೆ ಪೂರೈಕೆಗಾಗಿ ಹೊಂದಿರುವ ಆರ್ಥಿಕ ಸಾಮರ್ಥ್ಯವನ್ನು ತಿಳಿಸಿ ಜೊತೆಗೆ ಒಟ್ಟು ರೂ. 3,36,000–00 ಗಳ ಭದ್ರತಾ ಠೇವಣಿಯ (ಇ.ಎಂ.ಡಿ) ಡಿ.ಡಿ. ಯನ್ನು ಲಗತ್ತಿಸಿ 1ನೇ ಕವರ್ ಮೇಲ್ಭಾಗದಲ್ಲಿ "ತಾಂತ್ರಿಕ ಟೆಂಡರ್" ಎಂದು ಮೊಹರಾದ ಟೆಂಡರ್‌ನ್ನು ಸಲ್ಲಿಸುವುದು.

2ನೇ ಕವರ್‌ನಲ್ಲಿ ಮಾದರಿಗನುಸಾರವಾಗಿ ದರಖಾಸ್ತು ಸಹಿತ ಟೆಂಡರ್‌ನ್ನು ಭರ್ತಿ ಮಾಡಿ ಟೆಂಡರ್‌ನ್ನು ಸಲ್ಲಿಸುವುದು. ಈ ಎರಡು ಟೆಂಡರ್‌ಗಳನ್ನು ಮುದ್ದಾಂ ಆಗಲಿ ಅಥವಾ ನೊಂದಾಯಿತ ಅಂಚೆಯಲ್ಲಿಯಾಗಲಿ ಕಳುಹಿಸಿ ನಿಗದಿತ ಸಮಯ ದಿನಾಂಕ: 30/11/09 ರ ಸಂಜೆ (ನಾಲ್ಕು) 4–00 ಗಂಟೆಯೊಳಗಾಗಿ ಪೊಲೀಸ್ ಮಹಾ ನಿರೀಕ್ಷಕರು/ ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ, ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಕಛೇರಿ, 2ನೇ ಮಹಡಿ, ಬೆಂಗಳೂರು ಇವರಿಗೆ ಸ್ವೀಕೃತಿಯಾಗುವಂತೆ ಕಳುಹಿಸುವುದು. ಹಾಗೂ ಸ್ವೀಕೃತಿಯಾದ ಕುರಿತು ಸ್ವೀಕೃತಿಯನ್ನು ಪಡೆದು ಕೊಂಡಿರಬೇಕು. ಅವಧಿ ಮೀರಿ ಸ್ವೀಕೃತಿಗೊಳ್ಳುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಅಂಚೆ ಅಥವಾ ಕೊರಿಯರ್ ಮೂಲಕ ಬರುವ ಟೆಂಡರ್‌ಗಳಿಗೆ ನಿಗದಿತ ಅವಧಿ ಮೀರಿ ಬರುವುದಾಗಲಿ ರವಾನೆಯಲ್ಲಿ ತಡವಾದ ಕುರಿತಾಗಲಿ ಆಗುವ ವಿಳಂಬಕ್ಕೆ ಈ ಕಛೇರಿ ಮತ್ತು ಇಲಾಖೆಯವರು ಜವಾಬ್ದಾರಿಯಾಗಿರುವುದಿಲ್ಲ.

1) ಟೆಂಡರ್ ಫಾರ್ಮನ್ನು ಪಡೆಯುವ ದಿನಾಂಕ – 10/11/2009 ರಿಂದ 30/11/2009 ರ ಸಂಜೆ 4 ಗಂಟೆಯವರೆಗೆ

2) ಟೆಂಡರ್ ಫಾರಂನ ಬೆಲೆ 1ಕ್ಕೆ ರೂ. – 500–00 (ಐದು ನೂರು ಮಾತ್ರ)

ಟೆಂಡರ್ ಫಾರಂನ್ನು ಪಡೆಯುವವರು ರೂ. 500–00 ರ ಡಿ.ಡಿ.ಯನ್ನು ಪೊಲೀಸ್ ಮಹಾ ನಿರೀಕ್ಷಕರು/ ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ ರವರ ಹೆಸರಿಗೆ ತೆಗೆದು ಆ ಡಿ.ಡಿ.ಯನ್ನು ಪೊಲೀಸ್ ಮಹಾ ನಿರೀಕ್ಷಕರು/ ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ ರವರಿಗೆ ಸಲ್ಲಿಸಿ ಅರ್ಜಿಯನ್ನು ಪಡೆಯಬಹುದು. ಈ ಮೊತ್ತವು ವಾಪಾಸಾತಿಯ ಮೊತ್ತವಾಗಿರುವುದಿಲ್ಲ. ಟೆಂಡರ್ ಫಾರಂನಲ್ಲಿ ಟೆಂಡರ್ ಸಂಬಂಧಿತ ನಿಬಂಧನೆಗಳು ಹಾಗೂ ಮೊಬೈಲ್ ಇಂಟರ್‌ಸೆಪ್ಟರ್ ವಾಹನದ ನಿರ್ದಿಷ್ಟತೆಯನ್ನು (ಸ್ಪೆಸಿಫಿಕೇಶನನ್ನು) ಒಳಗೊಂಡಿರುತ್ತದೆ. ಟೆಂಡರ್ ಅರ್ಜಿಯನ್ನು ಪಡೆಯಲು ನಗದನ್ನಾಗಲಿ ಹಾಗೂ ಚೆಕ್ಕುಗಳನ್ನಾಗಲಿ ಸ್ವೀಕರಿಸಲಾಗುವುದಿಲ್ಲ. ಅಂಚೆ ಮೂಲಕ ಟೆಂಡರ್ ಅರ್ಜಿಯನ್ನು ಪಡೆಯಲು ಇಚ್ಛಿಸುವವರು 9"x12" ಅಳತೆಯ ಸ್ವವಿಳಾಸದ ರೂ. 35–00 ಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಒಂದು ಲಕೋಟೆಯೊಂದಿಗೆ 500/– ಗಳ ಡಿ.ಡಿಯನ್ನು ಕಳುಹಿಸಿ ಟೆಂಡರ್ ಫಾರಂಗಳನ್ನು ಪಡೆದುಕೊಳ್ಳಬಹುದು.

ಟೆಂಡರ್‌ದಾರರು ತಾವುಗಳು ಸಲ್ಲಿಸುವ ಮುಂಗಡ ಹಣ 3,36,000–00 ರೂ. ಗಳನ್ನು ಪೊಲೀಸ್ ಮಹಾ ನಿರೀಕ್ಷಕರು/ ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ ರವರ ಹೆಸರಿಗೆ ಡಿಡಿ.ಯನ್ನು ತೆಗೆದು ಟೆಂಡರ್ ಅರ್ಜಿಯ ಜೊತೆಗೆ ಲಗತ್ತಿಸಿರಬೇಕು. ಮುಂಗಡ ಠೇವಣಿ (ಇ.ಎಂ.ಡಿ) ಇಲ್ಲದ ಟೆಂಡರ್‌ಗಳನ್ನು ಹಾಗೂ ಡಿ.ಡಿ.ಯನ್ನು ಹೊರತುಪಡಿಸಿ ಚೆಕ್ಕುಗಳನ್ನಾಗಲಿ ಮತ್ತು ಇತರೆ ಯಾವುದೇ ಗ್ಯಾರಂಟಿಯ ಪತ್ರಗಳನ್ನಾಗಲೀ ಅಂಗೀಕರಿಸಲಾಗುವುದಿಲ್ಲ.

ಸ್ವೀಕರಿಸಿದ ಟೆಂಡರ್‌ನ್ನು ದಿನಾಂಕ: 02/12/2009 ರ ಸಂಜೆ ನಾಲ್ಕು ಗಂಟೆಗೆ ಮಾನ್ಯ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕಾನೂನು ಮತ್ತು ಸುವ್ಯವಸ್ಥೆ ರವರ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್ ಪ್ರಕ್ರಿಯೆಯ ಸಮಯದಲ್ಲಿ ಭಾಗವಹಿಸಬಹುದಾಗಿರುತ್ತದೆ. ಹೆಚ್ಚಿನ ವಿವರಗಳಿಗಾಗಿ ಪೊಲೀಸ್ ಮಹಾ ನಿರೀಕ್ಷಕರು/ ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ ರವರನ್ನು ಕಛೇರಿಯ ಕಾರ್ಯದ ಸಮಯದಲ್ಲಿ ಸಂಪರ್ಕಿಸಬಹುದು.

ಅಧ್ಯಕ್ಷರು ಖರೀದಿ ಸಮಿತಿ

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕಾನೂನು ಮತ್ತು ಸುವ್ಯವಸ್ಥೆ, ಬೆಂಗಳೂರು

## POLICE DEPARTMENT

**Office of the Director General and Inspector General of Police, Karnataka State, Bangalore**

**Tender Notification**

**No. CTRS.1/08/2009-10, Bangalore, Dated: 29th October 2009**

Procuring entity : Inspector General of Police and Commissioner for Traffic and Road Safety, Bangalore

Name of the Project Scheme : Traffic fund of Police Department

Sealed tenders are invited for the supply of eight interceptor vehicles for Police Department.

Sealed tenders duly superscribed as "Tenders for supply of Seven Interceptors vehicles to Police Department" shall be submitted either by Registered post or in person addressed to the Inspector General of Police and commissioner for Traffic and Road Safety, Nrupathunga Road, Bangalore so as to reach on or before **date : 30/11/2009 by 4.00 pm.** Tender offer for supply of interceptor vehicles shall comply with the specifications enclosed at annexure to this tender notifications. The tender can submitted to all the items in the Interceptor as shown in the specifications.

The tenderer shall submit two covers. The first cover shall contain experience, Past performance in supply of interceptor vehicle, Financial status and capacity. The second cover shall contain the prices quoted by the tenderer. The tenderer shall superscribe on the first cover as **"Technical Tender"** and second cover as **"Financial bid"** In addition to this they should be superscribed as **"tender for supply of interceptor vehicles to Police department."** Only those agencies / bidders who have the technical expertise and capability to execute the contract independently and without the involvement of middle man, shall participate in the bid.

Tender forms containing detailed terms and conditions and specifications of the item to be supplied can be obtained from this office between 10.00 am to 4.00 pm on any working day between date : 10/11/2009 to 30/11/2009. The cost of each tender form is rupees 500-00 (five hundred only), payable by open D.D only in favour of Inspector General of Police and Commissioner for Traffic and Road safety. Bangalore, which is nonrefundable (money order/Cash will not be accepted.) The tenderer who desires to obtain the tender form by post may send D.D for Rupees 500.00 drawn in favour of Inspector General of Police and Commissioner for Traffic and Road safety, Bangalore along with self addressed envelope of size 9x12 affixed in stamp of Rupees 35-00. Tender should be submitted in duplicate in sealed envelope duly superscribed as stated above and address of the firm below. Envelope should contain duly filled tender applications along with D.D drawn in favour of Inspector General of Police and Commissioner for Traffic and Road safety, Bangalore, towards E.M.D. for Rs.3,36,000-00 and details of financial, technical

service capability, Sales tax, income tax details, annual turn over details, brochures and catalogues wih technical specifications.

Tender applications received after due date will not be considered. The tender envelope received will be opened in the office of Additional Director General of Police, Law and Order, Bangalore. On **02/12/2009 at 4.00 pm,** the authority will first open technical tender cover for evaluation and prepare a list of qualified tenderers. Thereafter second financial bid covers of those who are qualified will be opened. Tenderers may be present at the time of opening of tenders.

The tenders received without Earnest Money Deposit (E.M.D) except in the form of Demand Draft shall be rejected. The department will not be responsible for any delay/loss/damage/ or non receipt of request/ tender documents/tender sent by post/courier etc., Department's right to accept /reject/split/ increase or decrease quantity any or all tenders without assigning any reasons is reserved.

In case the tender proceedings can't be held on the above dates due to unforeseen circumstances like holidays etc., the same will be held on the following dates at the same time.

Chairman Purchase Committee

P.R. 936 Additional Director General of Police, Law and Order, Bangalore.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ಜಿಲ್ಲಾ ನೋಂದಣಾಧಿಕಾರಿಗಳ ಕಾರ್ಯಾಲಯ, ರಾಯಚೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ:ಸಿಬ್ಬಂದಿ–18/2009–10, ರಾಯಚೂರು, ದಿನಾಂಕ: 20ನೇ ಅಕ್ಟೋಬರ್ 2009**

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಗಳನ್ನು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ನೇಮಕ ಮಾಡುವ ಕುರಿತು.

**ಉಲ್ಲೇಖ:** 1) ಕಾರ್ಯದರ್ಶಿಯವರು ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಅವರ ಪತ್ರ ಸಂಖ್ಯೆ:ಇ (3) 764–823/2009–10/ಪಿಎಸ್‌ಸಿ, ದಿನಾಂಕ: 25.07.2009 / 3.8.2009

2) ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಪತ್ರ ಸಂಖ್ಯೆ:ಸಿಬ್ಬಂದಿ 2–144/2005–06 ದಿನಾಂಕ: 24.08.2009.

ಕರ್ನಾಟಕ ಲೋಕಸೇವಾ ಆಯೋಗದಿಂದ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಆಯ್ಕೆಯಾಗಿ ಉಲ್ಲೇಖ (2) ರನ್ವಯ ಈ ಜಿಲ್ಲೆಗೆ ಹಂಚಿಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಗಳನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 4(1) ರನ್ವಯ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರಾಗಿ ವೇತನ ಶ್ರೇಣಿ ರೂ. 5800–10500 ರಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ನೇಮಕ ಮಾಡಿ ಇವರುಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗಳಿಗೆ ಸ್ಥಳ ನಿಯುಕ್ತಿ ಆದೇಶ ನೀಡಲಾಗಿದೆ.

| ಕ್ರ. ಸಂ. | ಹೆಸರು ಮತ್ತು ವಿಳಾಸ ಶ್ರೀ / ಶ್ರೀಮತಿ | KPSC ಆಯ್ಕೆಪಟ್ಟಿಯ ಕ್ರಮ ಸಂಖ್ಯೆ | ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 1. | ಶ್ರೀ ವಿಜಯಮಹಾಂತೇಶ್ ಬಿನ್ ಸಂಗಯ್ಯ ಸ್ವಾಮಿ ಸಾ॥ ಅಂಚೆ॥ ತುರವಿಹಾಳ ತಾ॥ ಸಿಂಧನೂರು ಜಿ॥ ರಾಯಚೂರು | 18 | ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ, ರಾಯಚೂರು |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

1) ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ (ಸಿವಿಲ್) 232/1999 ರ ಅರ್ಜಿಯಲ್ಲಿ ಆಗುವ ಘನ ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ ಹಾಗೂ ಅಭ್ಯರ್ಥಿಗಳು ಸದರಿ ಘನ ನ್ಯಾಯಾಲಯವು ನೀಡುವ ತೀರ್ಪಿಗೆ ಬದ್ಧರಾಗಿರತಕ್ಕದ್ದು.

2) ಅಭ್ಯರ್ಥಿಗಳ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಎಲ್ಲಾ ಅಭ್ಯರ್ಥಿಗಳು ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿರುವ

1) ಕನ್ನಡ ಭಾಷಾ ಪರೀಕ್ಷೆ 2) ಅಕೌಂಟ್ಸ್ ಲೋಯರ್ 3) ರಿಜಿಸ್ಟ್ರೇಷನ್ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ KCS (ಪ್ರೋಬೇಷನ್) ರೂಲ್ಸ್ 1977 ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

3) ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾದ ಮೇಲೆ (1) ನಿಗದಿತ ನಮೂನೆಯಲ್ಲಿ ಆಸ್ತಿ ವಿವರಣಾ ಪಟ್ಟಿಯನ್ನು ಮತ್ತು (2) ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ನಂತರ ಸರ್ಕಾರಿ ಆದೇಶ ಸಂಖ್ಯೆ: ಜೆಎಡಿ/37/SRR/74 ದಿನಾಂಕ: 05.08.1974 ರನ್ವಯ ಪ್ರಥಮ ವೇತನ ಪ್ರಮಾಣ ಪತ್ರವನ್ನು ನೀಡಲಾಗುವುದು.

4) ಅಭ್ಯರ್ಥಿಗಳು ಯಾವುದೇ ಉದ್ಯೋಗ ವಿನಿಮಯ ಕೇಂದ್ರದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದ್ದಲ್ಲಿ ಅದರ ನೋಂದಣಿ ಪತ್ರವನ್ನು ಅಥವಾ ನೋಂದಣಿ ಮಾಡಿಸದೇ ಇದ್ದಲ್ಲಿ ನೋಂದಣಿ ಮಾಡಿಸಿಲ್ಲವೆಂಬ ಬಗ್ಗೆ ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಪಡೆದು ಅದನ್ನು ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಸುಬ್ಬಯ್ಯ ವೃತ್ತ, ಬೆಂಗಳೂರು–27 ಇವರಿಗೆ ತಪ್ಪದೇ ಕಳುಹಿಸಿ ಮಾಹಿತಿಯನ್ನು ಈ ಕಛೇರಿಗೆ ನೀಡುವುದು.

5) ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾಗುವ ಮುನ್ನ ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞೆ ಮಾಡಿದ ನಿಷ್ಠೆ ಪ್ರಮಾಣ ಪತ್ರವನ್ನು ಬರೆದು ಕೊಡತಕ್ಕದ್ದು.

6) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: FD 65/SRR 67 ದಿನಾಂಕ: 22.06.1967 ರನ್ವಯ ವೈದ್ಯಕೀಯ ಪ್ರಮಾಣ ಪತ್ರವನ್ನು ಜಿಲ್ಲಾ ಸರ್ಜನ್‌ರಿಂದ ಪಡೆದು ಹಾಜರ್‌ಪಡಿಸತಕ್ಕದ್ದು.

7) ಸರ್ಕಾರದವರು ತಮ್ಮ ಆದೇಶ ಸಂಖ್ಯೆ: FD (SPL) 04 PET 2005 ದಿನಾಂಕ: 31.03.2006ರಲ್ಲಿ ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತಿ ಪಿಂಚಣಿ ಸೌಲಭ್ಯ ಯೋಜನೆಯ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಹೊಸದಾಗಿ New Defined Contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆಂದು ಆದೇಶ ಮಾಡಿರುತ್ತಾರೆ.

ಆದ್ದರಿಂದ ಈ ಇಲಾಖೆಯಲ್ಲಿ ನೇಮಕ ಹೊಂದಿದ ಈ ಅಭ್ಯರ್ಥಿಗಳೆಲ್ಲರೂ ಸರ್ಕಾರದ ಸದರಿ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಸದರಿ ಆದೇಶದಲ್ಲಿನ ನಿರ್ದೇಶನಕ್ಕೆ ಸದರಿ ಎಲ್ಲಾ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

8) ಅಭ್ಯರ್ಥಿಗಳು ಈ ನೇಮಕಾತಿ ಆದೇಶ ಮುಟ್ಟಿದ ಹದಿನೈದು ದಿವಸಗಳಲ್ಲಿ ನೇಮಕಾತಿ ಮಾಡಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಅವರ ನೇಮಕಾತಿಯ ಆದೇಶವನ್ನು ನಿಯಮಾನುಸಾರ ತಿದ್ದುಪಡಿಸಲಾಗುವುದು. ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.

9) ನೇಮಕಾತಿ ಮಾಡಿರುವ ಕಛೇರಿಯ ಮಾರ್ಪಾಡಿಗೆ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕೂ ಪುರಸ್ಕರಿಸಲಾಗುವುದಿಲ್ಲ.

10) ಇಲಾಖೆ ನಿಯಮಿಸಿರುವ ಪರೀಕ್ಷಾರ್ಥ ಅವಧಿಯ ತರಬೇತಿ ಕಾರ್ಯಕ್ರಮವನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದಲ್ಲಿ ಮಾತ್ರ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವೆಂದು ಪರಿಗಣಿಸಲಾಗುವುದು.

ಪಿ.ಆರ್. 918 ಜಿಲ್ಲಾ ನೋಂದಣಾಧಿಕಾರಿಗಳು, ರಾಯಚೂರು

**HEALTH AND FAMILY WELFARE SERVICES DEPARTMENT**

**Office of the Directorate of Health & F W Services, Ananda Rao Circle, Bangalore**

**No: CFT (4) 45/09-10**

**NOTIFICATION**

Shri / Smt **B. SREESHA** Working as Skilled Trades Man in the Department of Office of Directorate of Health & F W Services permitted to change his / her name to **SREESHA ANANTHACHAR**

Director

P.D. 171 Health and Family Welfare Services, Bangalore-9

**FORM - IV**

**(See Rule 12)**

**NOTICE**

It is hereby notified that the undersigned has changed his/her name from **VENKOBA S/O HALLEPPA** to **VENKOBA S/O HALLEPPA POPULAR**

P.D. 172 **VENKOBA S/O HALLEPPA**

**ಸಹಕಾರ ಇಲಾಖೆ**

**ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಕಛೇರಿ, ಕೊಠಡಿ ಸಂಖ್ಯೆ: 621, 6ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಕ್ಷಿಪ್ತ ಅಲ್ಪಾವಧಿ ಇ–ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಇ 235 ಎಂಆರ್‌ಇ 2009, ದಿನಾಂಕ: 26ನೇ ಅಕ್ಟೋಬರ್ 2009**

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಸಮಿತಿ ವ್ಯಾಪ್ತಿಯ ಕಾರಟಗಿ ಉಪ ಮಾರುಕಟ್ಟೆ ಪ್ರಾಂಗಣದಲ್ಲಿ ಸುಸಜ್ಜಿತ ಆಡಳಿತ ಕಛೇರಿ ಕಟ್ಟಡ ನಿರ್ಮಿಸುವ ಅಭಿವೃದ್ಧಿ ಕಾಮಗಾರಿಗಳಿಗೆ ಐಟಂವಾರು ಟೆಂಡರುಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಪ್ರಥಮ ದರ್ಜೆ ಗುತ್ತಿಗೆದಾರರಿಂದ ಇಲೆಕ್ಟ್ರಾನಿಕ್ ಟೆಂಡರ್ ಪದ್ಧತಿಯಲ್ಲಿ ಹಾಗೂ 2 ಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಸಲ್ಲಿಸಲು ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರ್ ಮೊಬಲಗು (ಅಂದಾಜು) (ರೂ.ಗಳಲ್ಲಿ) | ಇ.ಎಂ.ಡಿ. ಮೊಬಲಗು (ರೂ.ಗಳಲ್ಲಿ) | ಎಪಿಎಂಸಿ ಟೆಂಡರ್ ಪ್ರೊಸೆಸಿಂಗ್ ಫೀ (ರೂ.ಗಳಲ್ಲಿ) | ಕೆಲಸ ಪೂರೈಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಸೇರಿ) | ಅರ್ಹ ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಸಮಿತಿ ವ್ಯಾಪ್ತಿಯ ಕಾರಟಗಿ ಉಪ ಮಾರುಕಟ್ಟೆ ಪ್ರಾಂಗಣದಲ್ಲಿ ಸುಸಜ್ಜಿತ ಆಡಳಿತ ಕಛೇರಿ ಕಟ್ಟಡ ನಿರ್ಮಿಸುವ ಅಭಿವೃದ್ಧಿ ಕಾಮಗಾರಿ | 123.00 | 2,00,000 | 13,000 | 6 ತಿಂಗಳು | 1ನೇ ದರ್ಜೆ |

1. ಫ್ರೀ ಬಿಡ್ ಮೀಟಿಂಗ್ ದಿನಾಂಕ : 25/11/2009 ಸಂಜೆ 4.30 ಗಂಟೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ : 26/11/2009 ಸಂಜೆ 3.00 ಗಂಟೆ ವರೆಗೆ
3. ಟೆಂಡರ್ ತಕರಾರು ಸಮಜಾಯಿಷಿ ದಿನಾಂಕ : 27/11/2009 ಮಧ್ಯಾಹ್ನ 12.00 ಗಂಟೆ ವರೆಗೆ
4. ಭರ್ತಿ ಮಾಡಿದ ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ : 02/12/2009 ಸಂಜೆ 4.30 ಗಂಟೆ ವರೆಗೆ
5. ತಾಂತ್ರಿಕ ಬಿಡ್ ತೆರೆಯುವ ದಿನಾಂಕ : 06/12/2009 ಬೆಳಿಗ್ಗೆ 11.00 ಗಂಟೆಗೆ
6. ಆರ್ಥಿಕ ಬಿಡ್ ತೆರೆಯುವ ದಿನಾಂಕ 11/12/2009 ಸಂಜೆ 4.00 ಗಂಟೆಗೆ

★ ಎ.ಪಿ.ಎಂ.ಸಿ. ಟೆಂಡರ್ ಫಾರಂ ಫೀ ಮೊತ್ತ ರೂ.13,000/– ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಗಂಗಾವತಿ ಇವರ ಹೆಸರಿನಲ್ಲಿ ನೀಡುವುದು.

★ ಇ.ಎಂ.ಡಿ ಮೊತ್ತ ರೂ.2,00,000/– ಗಳನ್ನು ಪ್ರತ್ಯೇಕವಾಗಿ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಎಕ್ಸಿಸ್ ಬ್ಯಾಂಕಿನಲ್ಲಿ ಹೊಂದಿರುವ ಕರ್ನಾಟಕ ಸರ್ಕಾರದ ಸೆಂಟ್ರಲ್ ಪೂಲಿಂಗ್ ಅಕೌಂಟಿನಲ್ಲಿ ಟೆಂಡರ್ ಡಾಕ್ಯೂಮೆಂಟಿನಲ್ಲಿ ತಿಳಿಸಿರುವ ಯಾವುದಾದರೂ ಒಂದು ಮಾದರಿಯಲ್ಲಿ ಸಂದಾಯ ಮಾಡುವುದು.

★ ಮೇಲ್ಕಂಡ ದಿನಾಂಕಗಳಲ್ಲಿ ಸರ್ಕಾರಿ ರಜೆ ದಿನಗಳಾದಲ್ಲಿ ಮುಂದಿನ ದಿನವನ್ನು ಪರಿಗಣಿಸತಕ್ಕದ್ದು.

★ ಹೆಚ್ಚಿನ ಮಾಹಿತಿಗಾಗಿ http://eproc.karnataka.gov.in ಈ ವೆಬ್‌ಸೈಟ್‌ನಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

ಈ ಟೆಂಡರ್ ಪ್ರಕ್ರಿಯೆಯಲ್ಲಿ ಯಾವುದಾದರೂ ತಿದ್ದುಪಡಿಗಳಿದ್ದರೆ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

ಟೆಂಡರ್‌ಗೆ ಸಂಬಂಧಿಸಿದಂತೆ, ಸಾಮಾನ್ಯ ಷರತ್ತುಗಳು (ಅರ್ಹತಾ ಷರತ್ತುಗಳು) ಮತ್ತು ನಿಬಂಧನೆಗಳನ್ನು ಟೆಂಡರ್ ಫಾರಂನೊಂದಿಗೆ ಪಡೆಯಬಹುದು.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕರಣ 8 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಹೇಳಿದ ಟೆಂಡರ್‌ನ ವಿವರಗಳನ್ನು ಪ್ರಕಟಿಸಲಾಗಿದೆ.

**ಫೈರೋಜಾ ಖಾನಂ**

ಪಿ.ಆರ್. 941

ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಹಾಗೂ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಸಹಕಾರ ಇಲಾಖೆ**

**ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಕಛೇರಿ, ಕೊಠಡಿ ಸಂಖ್ಯೆ: 621, 6ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಕ್ಷಿಪ್ತ ಇ–ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಇ 204 ಎಂಆರ್‌ಇ 2009, ದಿನಾಂಕ: 24ನೇ ಅಕ್ಟೋಬರ್ 2009**

ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಂಗಾರಪೇಟೆ ಸಮಿತಿ ವ್ಯಾಪ್ತಿಯ ಡಿ.ಎಂ.ಐ. ಯೋಜನೆಯಡಿ ಮುಖ್ಯ ಮಾರುಕಟ್ಟೆ ಪ್ರಾಂಗಣವನ್ನು ಅಭಿವೃದ್ಧಿಪಡಿಸುವ ಕಾಮಗಾರಿಗಳಿಗೆ ಐಟಂವಾರು ಟೆಂಡರುಗಳನ್ನು ಲೋಕೋಪಯೋಗಿ

ಇಲಾಖೆಯಲ್ಲಿ ನೊಂದಾಯಿತ ಪ್ರಥಮ ದರ್ಜೆ ಗುತ್ತಿಗೆದಾರರಿಂದ ಇಲೆಕ್ಟ್ರಾನಿಕ್ ಟೆಂಡರ್ ಪದ್ಧತಿಯಲ್ಲಿ ಹಾಗೂ 2 ಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಸಲ್ಲಿಸಲು ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರ್ ಮೊಬಲಗು (ಅಂದಾಜು) (ರೂ.ಗಳಲ್ಲಿ) | ಇ.ಎಂ.ಡಿ. ಮೊಬಲಗು (ರೂ.ಗಳಲ್ಲಿ) | ಎಪಿಎಂಸಿ ಟೆಂಡರ್ ಪ್ರೊಸೆಸಿಂಗ್ ಫೀ (ರೂ.ಗಳಲ್ಲಿ) | ಕೆಲಸ ಪೂರೈಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಸೇರಿ) | ಅರ್ಹ ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | ಡಿ.ಎಂ.ಐ. ಯೋಜನೆಯಡಿ ಬಂಗಾರಪೇಟೆ ಮುಖ್ಯ ಮಾರುಕಟ್ಟೆ ಪ್ರಾಂಗಣವನ್ನು ಅಭಿವೃದ್ಧಿಪಡಿಸುವ ಕಾಮಗಾರಿ | 525.90 | 7,89,000 | 55,000 | 9 ತಿಂಗಳು | 1ನೇ ದರ್ಜೆ |

1. ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ : 21/12/2009 ಸಂಜೆ 4.30 ಗಂಟೆ ವರೆಗೆ
2. ಫ್ರೀ ಬಿಡ್ ಮೀಟಿಂಗ್ ವಿವರಗಳು : 23/12/2009 ಬೆಳಿಗ್ಗೆ 4.30 ಗಂಟೆ ವರೆಗೆ
3. ಭರ್ತಿ ಮಾಡಿದ ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ : 26/12/2009 ಸಂಜೆ 3.30 ಗಂಟೆ ವರೆಗೆ
4. ತಾಂತ್ರಿಕ ಬಿಡ್ ತೆರೆಯುವ ದಿನಾಂಕ : 30/12/2009 ಸಂಜೆ 4.30 ಗಂಟೆ ವರೆಗೆ
5. ಆರ್ಥಿಕ ಬಿಡ್ ತೆರೆಯುವ ದಿನಾಂಕ : ಪ್ರತ್ಯೇಕವಾಗಿ ತಿಳಿಸಲಾಗುವುದು

★ ಎ.ಪಿ.ಎಂ.ಸಿ. ಟೆಂಡರ್ ಫಾರಂ ಫೀ ಮೊತ್ತ ರೂ.55,000/– ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಂಗಾರಪೇಟೆ ಇವರ ಹೆಸರಿನಲ್ಲಿ ನೀಡುವುದು.

★ ಇ.ಎಂ.ಡಿ ಮೊತ್ತ ರೂ.7,89,000/– ಗಳನ್ನು ಪ್ರತ್ಯೇಕವಾಗಿ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಎಕ್ಸಿಸ್ ಬ್ಯಾಂಕಿನಲ್ಲಿ ಹೊಂದಿರುವ ಕರ್ನಾಟಕ ಸರ್ಕಾರದ ಸೆಂಟ್ರಲ್ ಪೂಲಿಂಗ್ ಅಕೌಂಟಿನಲ್ಲಿ ಟೆಂಡರ್ ಡಾಕ್ಯೂಮೆಂಟಿನಲ್ಲಿ ತಿಳಿಸಿರುವ ಯಾವುದಾದರೂ ಒಂದು ಮಾದರಿಯಲ್ಲಿ ಸಂದಾಯ ಮಾಡುವುದು.

★ ಮೇಲ್ಕಂಡ ದಿನಾಂಕಗಳಲ್ಲಿ ಸರ್ಕಾರಿ ರಜೆ ದಿನಗಳಾದಲ್ಲಿ ಮುಂದಿನ ದಿನವನ್ನು ಪರಿಗಣಿಸತಕ್ಕದ್ದು.

★ ಹೆಚ್ಚಿನ ಮಾಹಿತಿಗಾಗಿ http://eproc.karnataka.gov.in ಈ ವೆಬ್‌ಸೈಟ್‌ನಲ್ಲಿ ಸಂಪರ್ಕಿಸಿ ವಿವರಗಳನ್ನು ಪಡೆಯಬಹುದು.

ಈ ಟೆಂಡರ್ ಪ್ರಕ್ರಿಯೆಯಲ್ಲಿ ಯಾವುದಾದರೂ ತಿದ್ದುಪಡಿಗಳಿದ್ದರೆ ವೆಬ್‌ಸೈಟ್‌ನಲ್ಲಿ ಪ್ರಕಟಿಸಲಾಗುವುದು.

ಟೆಂಡರ್‌ಗೆ ಸಂಬಂಧಿಸಿದಂತೆ, ಸಾಮಾನ್ಯ ಷರತ್ತುಗಳು (ಅರ್ಹತಾ ಷರತ್ತುಗಳು) ಮತ್ತು ನಿಬಂಧನೆಗಳನ್ನು ಟೆಂಡರ್ ಫಾರಂನೊಂದಿಗೆ ಪಡೆಯಬಹುದು.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಪ್ರಕರಣ 8 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಹೇಳಿದ ಟೆಂಡರ್‌ನ ವಿವರಗಳನ್ನು ಪ್ರಕಟಿಸಲಾಗಿದೆ.

**ಫೈರೋಜಾ ಖಾನಂ**

ಪಿ.ಆರ್. 942

ರಾಜ್ಯ ಟೆಂಡರ್ ಬುಲೆಟಿನ್ ಅಧಿಕಾರಿ ಹಾಗೂ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ಅರಣ್ಯ ಇಲಾಖೆ

### ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

### ಸಿವಿಲ್ ಕಾಮಗಾರಿ ನಿರ್ವಹಿಸುವ ಬಗ್ಗೆ ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ ಎ2.ಬಿಜಿಟಿ.ಕಟ್ಟಡ.ಸಿಆರ್.45/09–10, ದಿನಾಂಕ: 29ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2009–10ನೇ ಸಾಲಿನಲ್ಲಿ ಸಾಗರ ಅರಣ್ಯ ವಿಭಾಗದ ವ್ಯಾಪ್ತಿಯ ನಗರ ವಲಯದಲ್ಲಿ ಅನುಬಂಧದಲ್ಲಿ ನಮೂದಿಸಿರುವ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಲು, 2009–10ನೇ ಸಾಲಿಗೆ ಈ ವಿಭಾಗದಲ್ಲಿ ನೋಂದಾಯಿತರಾಗಿರುವ, ಕರ್ನಾಟಕ ಸರ್ಕಾರದ ಲೋಕೋಪಯೋಗಿ/ನೀರಾವರಿ/ಇತರೆ ಯಾವುದೇ ಇಲಾಖೆಯಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವಿರುವ ಅರಣ್ಯ ಗುತ್ತಿಗೆದಾರರಿಂದ ಮೊಹರಾದ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಟೆಂಡರನ್ನು ದಿ:25–11–2009ರ ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಅಥವಾ ಅವರಿಂದ ಅಧಿಕೃತವಾಗಿ ಸದರಿ ಉದ್ದೇಶಕ್ಕಾಗಿ ನಿಯೋಜಿಲ್ಪಟ್ಟ ಅಧಿಕಾರಿಯವರು ಸ್ವೀಕರಿಸಿ,

ಅದೇ ದಿನ ಮಧ್ಯಾಹ್ನ 4–30ಕ್ಕೆ ಸರಿಯಾಗಿ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡುವರು.

ಒಂದು ವೇಳೆ ದಿ:25–11–2009ರಂದು ಯಾವುದೇ ಗುತ್ತಿಗೆದಾರರೂ ಟೆಂಡರ್‌ನಲ್ಲಿ ಭಾಗವಹಿಸದೇ ಇದ್ದಲ್ಲಿ ಅಥವಾ ಯಾವುದೇ ಯುನಿಟ್‌ಗಳಿಗೆ ಟೆಂಡರ್ ಸ್ವೀಕೃತಿಯಾಗದೇ ಇದ್ದಲ್ಲಿ, ಇದೇ ಟೆಂಡರು ಪ್ರಕ್ರಿಯೆಯನ್ನು ಮುಂದುವರಿಸಿ, ಮರು ಟೆಂಡರನ್ನು ದಿ:30–11–2009ರಂದು ಅಪರಾಹ್ನ 3–00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು, ಮತ್ತು ಸದರಿ ದಿನಾಂಕದಂದೇ ಅಪರಾಹ್ನ 4–30 ಗಂಟೆಗೆ ಟೆಂಡರುದಾರರ ಸಮ್ಮುಖದಲ್ಲಿ ಮೊಹರು ಮಾಡಿರುವ ಟೆಂಡರು ಲಕೋಟೆಯನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡಲಾಗುವುದು.

**ಅನುಬಂಧ**

| ಕ್ರ. ಸಂ | ವಲಯ | ಯುನಿಟ್ ಸಂಖ್ಯೆ | ಕಾಮಗಾರಿಯ ವಿವರ | ಅಂದಾಜು ಮೊತ್ತ (ರೂ.ಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) |
|---|---|---|---|---|---|
| 1 | ನಗರ | 1 | ನಗರ ವಲಯದ ನಗರದಲ್ಲಿ ವಲಯ ಅರಣ್ಯಾಧಿಕಾರಿಗಳ ಕಚೇರಿ ನಿರ್ಮಾಣ ಕಾಮಗಾರಿ. | 10,00,000/– | 18,175/– |
| 2 | ನಗರ | 2 | ನಗರ ವಲಯದ ನಾಗೋಡಿ ಅರಣ್ಯ ತನಿಖಾ ಠಾಣೆಯಲ್ಲಿ ಸಹಾಯಕ ಸಿಬ್ಬಂದಿ ವಸತಿಗೃಹ ನಿರ್ಮಾಣ ಕಾಮಗಾರಿ. | 6,40,000/– | 14,550/– |

**ನಿಬಂಧನೆಗಳು:–**

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಸ್ಥಳಗಳ ಬದಲಾವಣೆ ಇದ್ದಲ್ಲಿ ಪರಿಷ್ಕೃತ ಗುರಿ ಮತ್ತು ಸ್ಥಳ ವಿವರಗಳನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು.
2. ಟೆಂಡರ್ ಫಾರಂಗಳನ್ನು ರೂ.1000/– ಹಾಗೂ ತೆರಿಗೆ ಪಾವತಿ ಮಾಡಿ ದಿ:25–11–2009 ರಂದು ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1–00 ಗಂಟೆಯೊಳಗೆ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರತಕ್ಕದ್ದು ಹಾಗೂ ಸರ್ಕಾರದ ಲೋಕೋಪಯೋಗಿ/ನೀರಾವರಿ/ ಇತರೆ ಯಾವುದೇ ಇಲಾಖೆಯಲ್ಲಿ ಸಿವಿಲ್ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವನ್ನು ಹೊಂದಿರುವ ಬಗ್ಗೆ ಅಧಿಕೃತ ದಾಖಲೆಗಳನ್ನು ಸಲ್ಲಿಸತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಅಗತ್ಯ ಇಎಂಡಿಯೊಂದಿಗೆ ಪ್ರತಿ ಕಾಮಗಾರಿಗೆ ಪ್ರತ್ಯೇಕವಾದ ಮೊಹರು ಮಾಡಿದ ಲಕೋಟೆಯಲ್ಲಿ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿ:25–11–2009ರಂದು ಅಪರಾಹ್ನ 3–00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಅಥವಾ ಅವರಿಂದ ಸದರಿ ಉದ್ದೇಶಕ್ಕಾಗಿ ನೇಮಕ ಮಾಡಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಹಾಗೂ ಅದೇ ದಿನ 4–30 ಗಂಟೆಗೆ ಟೆಂಡರ್‌ನ್ನು ತೆರದು ಫಲಿತಾಂಶವನ್ನು ಘೋಷಣೆ ಮಾಡಲಾಗುವುದು.
5. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಪ್ರತಿ ಕಾಮಗಾರಿಗೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಪರವಾಗಿ ರಾಷ್ಟ್ರೀಕೃತ/ಶೆಡ್ಯೂಲ್ಡ್ ಬ್ಯಾಂಕಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ. ಯಾವುದೇ ಕಾರಣಕ್ಕೂ ಚೆಕ್ಕನ್ನು ಮಾನ್ಯ ಮಾಡಲಾಗುವುದಿಲ್ಲ.
6. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
7. ತಂತಿ ಸಂದೇಶದ ಮೂಲಕ, ಅಂಚೆ ಮೂಲಕ ಸಲ್ಲಿಸುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ. ಸಮಯ ಮೀರಿದ ನಿಯಮಾನುಸಾರವಿಲ್ಲದ ಟೆಂಡರ್‌ಗಳನ್ನು ಯಾವುದೇ ಕಾರಣ/ಸೂಚನೆ ನೀಡದೇ ತಿರಸ್ಕರಿಸಲಾಗುವುದು.
8. ಕಾಮಗಾರಿಯ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಕಛೇರಿಯ ವೇಳೆಯಲ್ಲಿ ಕೆಳಸಹಿದಾರರ ಕಛೇರಿಯನ್ನು ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
9. ದಿ:25–11–2009ರಂದು ಯಾವ ಗುತ್ತಿಗೆದಾರರೂ ಟೆಂಡರ್ ಪ್ರಕ್ರಿಯೆಯಲ್ಲಿ ಭಾಗವಹಿಸದೇ ಇದ್ದಲ್ಲಿ ಅಥವಾ ಯಾವುದೇ ಯುನಿಟ್‌ಗಳಿಗೆ ಟೆಂಡರ್ ಸ್ವೀಕೃತಿಯಾಗದೇ ಇದ್ದಲ್ಲಿ ಇದೇ ಟೆಂಡರು ಪ್ರಕ್ರಿಯೆಯನ್ನು ಮುಂದುವರಿಸಿ, ದಿ:30.12.2009ರಂದು ಈ ಮೇಲಿನ ಎಲ್ಲಾ ನಿಯಮಗಳನ್ನು ಅನುಸರಿಸಿ ಟೆಂಡರ್ ಸ್ವೀಕರಿಸಲಾಗುವುದು. ಮರು ಟೆಂಡರ್‌ಗೆ ಸಂಬಂಧಿಸಿದಂತೆ ಟೆಂಡರ್ ನಮೂನೆಗಳನ್ನು ದಿ:30–11–2008ರಂದು ಮಧ್ಯಾಹ್ನ 1–00ಗಂಟೆಯೊಳಗೆ ಪಡೆಯತಕ್ಕದ್ದು. ಹಾಗೂ ಭರ್ತಿ ಮಾಡಿದ ಟೆಂಡರ್ ನಮೂನೆಗಳನ್ನು ಅಗತ್ಯ ಇಎಂಡಿ ಮೊತ್ತದೊಂದಿಗೆ ಅದೇ ದಿನ ಮಧ್ಯಾಹ್ನ 3–00 ಗಂಟೆಯೊಳಗಾಗಿ ಸಲ್ಲಿಸತಕ್ಕದ್ದು. ಉಳಿದಂತೆ 1 ರಿಂದ 8ರವರೆಗಿನ ನಿಬಂಧನೆಗಳು ಮರು ಟೆಂಡರ್‌ಗೂ ಸಹ ಅನ್ವಯಿಸುತ್ತದೆ.

ಪಿ.ಆರ್. 940 ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

**ಸಾಗರ ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಗರ ವಿಭಾಗ, ಸಾಗರ**

**ಅರಣ್ಯ ಕಾಮಗಾರಿಗಳ ಕುರಿತು ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಕ್ರ.ಸಂ.ಎ2.ಬಿಜಿಟಿ.ಟೆಂಡರ್.ಸಿಆರ್07/09–10, ದಿ: 29ನೇ ಅಕ್ಟೋಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಸಾಗರ ಅರಣ್ಯ ವಿಭಾಗದ ವ್ಯಾಪ್ತಿಯ ವಿವಿಧ ವಲಯಗಳಲ್ಲಿ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಲಾಗಿರುವಂತೆ ವಿವಿಧ ಸ್ಥಳಗಳಲ್ಲಿ 2010ನೇ ಮಳೆಗಾಲದಲ್ಲಿ ನೆಡುತೋಪು ರಚನೆಗೆ ಮಾಡಲು ಅಗತ್ಯ ಮುಂಗಡ ಕೆಲಸಗಳನ್ನು (ಮುಂಗಡ ರಿಪ್ಪಿಂಗ್, ಜಾನುವಾರು ನಿರೋಧಕ ಕಂದಕ, ಗುಂಡಿ ತೆಗೆಯುವುದು ಮತ್ತು ಸಸಿ ಬೆಳೆಸುವುದು, ಮಣ್ಣು ಸಂರಕ್ಷಣಾ ಕೆಲಸ ಮತ್ತು ಇತ್ಯಾದಿ ಪೂರಕ ಕೆಲಸಗಳು) ನಿರ್ವಹಿಸುವ ಬಗ್ಗೆ ಈ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ. ಆಸಕ್ತ ನೋಂದಾಯಿತ ಅರಣ್ಯ ಗುತ್ತಿಗೆದಾರರು ಅನುಸೂಚಿಯಲ್ಲಿ ನಮೂದಿಸಿರುವ ಕಾಮಗಾರಿಯನ್ನು ನಿರ್ವಹಿಸುವ ಬಗ್ಗೆ ಕಾಮಗಾರಿವಾರು ಟೆಂಡರನ್ನು ದಿ:25–11–2009ರ ಅಪರಾಹ್ನ 3–00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರಿಗೆ ಸಲ್ಲಿಸಲು ಕೋರಿದೆ. ಟೆಂಡರುದಾರರ ಸಮಕ್ಷಮದಲ್ಲಿ ಅದೇ ದಿನ ಅಪರಾಹ್ನ 4–30 ಗಂಟೆಗೆ ಸರಿಯಾಗಿ ಈ ಕಛೇರಿಯಲ್ಲಿ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತ ಅಧಿಕಾರ ಪಡೆದ ಅಧಿಕಾರಿಯವರು ಟೆಂಡರು ಲಕೋಟೆಯನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡುವರು.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರೂ ಟೆಂಡರು ಪ್ರಕ್ರಿಯೆಯಲ್ಲಿ ಭಾಗವಹಿಸದಿದ್ದಲ್ಲಿ ಇದೇ ಟೆಂಡರು ಪ್ರಕ್ರಿಯೆಯನ್ನು ಮುಂದುವರಿಸಿ, ಮರು ಟೆಂಡರನ್ನು ದಿ:30–11–09ರಂದು ಟೆಂಡರ್ ನಡೆಸಲಾಗುವುದು. ಅದೇ ದಿನ ಅಪರಾಹ್ನ 4–30 ಗಂಟೆಗೆ ಸರಿಯಾಗಿ ಈ ಕಛೇರಿಯಲ್ಲಿ ಕೆಳಸಹಿದಾರರು ಅಥವಾ ಅವರಿಂದ ಅಧಿಕೃತ ಅಧಿಕಾರ ಪಡೆದ ಅಧಿಕಾರಿಯವರು ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರು ಲಕೋಟೆಯನ್ನು ತೆರೆದು ಟೆಂಡರ್ ಫಲಿತಾಂಶವನ್ನು ಘೋಷಣೆ ಮಾಡುವರು.

**ನಿಬಂಧನೆಗಳು:–**

1. ಟೆಂಡರ್ ಪ್ರಕಟಣೆಯಲ್ಲಿ ತೋರಿಸಿರುವ ಕಾಮಗಾರಿಗಳ ಗುರಿ ಮತ್ತು ಪ್ರದೇಶಗಳು ವ್ಯತ್ಯಾಸವಾದಲ್ಲಿ ಪರಿಷ್ಕೃತ ಗುರಿ ಮತ್ತು ಪ್ರದೇಶಗಳನ್ನು ಕೆಲಸದ ಆದೇಶದ ಮೊದಲು ನೀಡಲಾಗುವುದು.
2. ಟೆಂಡರ್ ಫಾರಂಗಳನ್ನು ರೂ.200/–ಹಾಗೂ ತೆರಿಗೆ ಪಾವತಿ ಮಾಡಿ ದಿ:25–11–2009ರ ಮಧ್ಯಾಹ್ನ 12–30 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು ಮತ್ತು ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2009–10ನೇ ಸಾಲಿಗೆ ತಮ್ಮ ಹೆಸರನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಂಡಿರತಕ್ಕದ್ದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಕಾಮಗಾರಿಗೆ ಪ್ರತ್ಯೇಕವಾದ ಮೊಹರು ಮಾಡಿದ ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
4. ಭರ್ತಿ ಮಾಡಿದ ಟೆಂಡರ್ ಫಾರಂನ್ನು ದಿ:25–11–2009ರಂದು ಅಪರಾಹ್ನ 3–00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಅಥವಾ ಅವರಿಂದ ಸದರಿ ಉದ್ದೇಶಕ್ಕಾಗಿ ನೇಮಕ ಮಾಡಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು. ಹಾಗೂ ಅದೇ ದಿನ 4–30 ಗಂಟೆಗೆ ಟೆಂಡರ್‌ನ್ನು ತೆರೆದು ಫಲಿತಾಂಶವನ್ನು ಘೋಷಣೆ ಮಾಡಲಾಗುವುದು.
5. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾಯ ಕೆಲಸಕ್ಕೆ ನಿಗದಿಪಡಿಸುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಪರವಾಗಿ ರಾಷ್ಟ್ರೀಕೃತ/ಶೆಡ್ಯೂಲ್ಡ್ ಬ್ಯಾಂಕಿನಲ್ಲಿ ಪಡೆದ ಡಿ.ಡಿ. ಯನ್ನು ಟೆಂಡರ್ ಜೊತೆಗೆ ಸಲ್ಲಿಸತಕ್ಕದ್ದು.
6. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
7. ಯಾವುದೇ ಕಾರಣ ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು, ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಇವರು ಕಾಯ್ದಿರಿಸಿಕೊಂಡಿರುತ್ತಾರೆ.
8. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿಯನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
9. ದಿ:25–10–2009ರಂದು ಟೆಂಡರ್ ಆಗದ ಯುನಿಟ್‌ಗಳಿಗೆ ಮರು ಟೆಂಡರನ್ನು ದಿ:30–11–2009ರಂದು ನಿಗದಿಪಡಿಸಿದ್ದು, ಮರು ಟೆಂಡರಿಗೆ ಟೆಂಡರ್ ನಮೂನೆಗಳನ್ನು ದಿನಾಂಕ:30–11–2009ರಂದು ಮಧ್ಯಾಹ್ನ 1–00 ಗಂಟೆಯೊಳಗೆ ಪಡೆಯತಕ್ಕದ್ದು. ಹಾಗೂ ಭರ್ತಿ ಮಾಡಿದ ಟೆಂಡರ್ ನಮೂನೆಗಳನ್ನು ಅಗತ್ಯ ಇಎಂಡಿ ಮೊತ್ತದೊಂದಿಗೆ ಅದೇ ದಿನ ಮಧ್ಯಾಹ್ನ 3–00 ಗಂಟೆಯೊಳಗಾಗಿ ಸಲ್ಲಿಸತಕ್ಕದ್ದು. ಉಳಿದಂತೆ 1 ರಿಂದ 8ರವರೆಗಿನ ನಿಬಂಧನೆಗಳು ಮರು ಟೆಂಡರ್‌ಗೂ ಸಹ ಅನ್ವಯಿಸುತ್ತದೆ.

**ಮಹೇಶ್ ಬಿ. ಶಿರೂರ್, ಭಾ.ಅ.ಸೇ**

ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ

ಸಾಗರ ಅರಣ್ಯ ವಿಭಾಗ

ಅನುಬಂಧ

ದಿನಾಂಕ: 25–11–2009ರಂದು ಟೆಂಡರ್‌ಗೆ ಇಟ್ಟಿರುವ ಕಾಮಗಾರಿಯ ವಿವರ.

| ಯುನಿಟ್ ಸಂಖ್ಯೆ | ವಲಯ | ಯೋಜನೆ/ಯೋಜನೇತರ ಲೆಕ್ಕಶೀರ್ಷಿಕೆ | ಸ್ಥಳ | ಸರ್ವೆ ನಂಬರ್ | ಮುಂಗಡ ಕಾಮ ಗಾರಿ ವಿಸ್ತೀರ್ಣ ಹೆ.ನಲ್ಲಿ | ಬೆಳೆಸಬೇಕಾದ ಸಸಿಗಳ ಅಳತೆ ಮತ್ತು ಸಂಖ್ಯೆ | | ಮುಂಗಡ ಗುಂಡಿ ಹಾಗೂ ಸಸಿ ಬೆಳೆಸುವ ಕಾಮಗಾರಿಯ ಮೊತ್ತ ರೂ | ಭೂಸಾರ ಮತ್ತು ತೇವಾಂಶ ಸಂರಕ್ಷಣಾ ಕಾಮಗಾರಿ | ಕಾಮಗಾರಿಯ ಒಟ್ಟು ಮೊತ್ತ ರೂ | ಟೆಂಡರ್ ನೊಂದಿಗೆ ಸಲ್ಲಿಸ ಬೇಕಾಗಿರುವ ಇ.ಎಂ.ಡಿ. ಮೊತ್ತ ರೂ. |
|---|---|---|---|---|---|---|---|---|---|---|---|
| | | | | | | ಅಳತೆ | ಸಂಖ್ಯೆ | | | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1 | ಸಾಗರ | KFDF-03-Other pltn | ಗುತ್ತನಹಳ್ಳಿ, ಬ್ಲಾಕ್–1 | 20 | 15 | 5x8<br>6x9 | 6600<br>19800 | 277500 | – | 277500 | 6950 |
| 2 | ಸಾಗರ | KFDF-03-Other pltn | ಗುತ್ತನಹಳ್ಳಿ, ಬ್ಲಾಕ್–2 | 20 | 15 | 5x8<br>6x9 | 13200<br>39600 | 277500 | – | 277500 | 6950 |
| 3 | ಸಾಗರ | DDF | ಮೂಸೂರು | 1 | 25 | 5x8 | 30250 | 338000 | | 338000 | 8450 |
| 4 | ಸಾಗರ | KSFMBC-M-2 | ಹಳವಗೋಡು ಜಂಬಾನಿ ಬ್ಲಾಕ್–1 | 12<br>13 | 15 | 6x9<br>8x12 | 6600<br>6600 | 283500 | 78750 | 362250 | 9050 |
| 5 | ಸಾಗರ | KSFMBC-M-2 | ಹಳವಗೋಡು ಜಂಬಾನಿ ಬ್ಲಾಕ್–2 | 12<br>13 | 15 | 6x9<br>8x12 | 6600<br>6600 | 283500 | 78750 | 362250 | 9050 |
| 6 | ಸಾಗರ | KSFMBC-M-2 | ಜಂಬಾನಿ | 22 | 25 | 8x12 | 11000 | 350000 | 91500 | 441500 | 11050 |
| 7 | ಸಾಗರ | KSFMBC-M-2 | ಜಂಬಾನಿ | 22 | 25 | 8x12 | 11000 | 486500 | 91500 | 578000 | 11050 |
| 8 | ಕಾರ್ಗಲ್ | KSFMBC-M-4 | ಬರುವೆ | 36, 46 | 25 | 5x8<br>8x12 | 41250<br>2750 | 486500 | 140750 | 627250 | 15680 |
| 9 | ಕಾರ್ಗಲ್ | KSFMBC-M-4 | ಮರಾಠಿ | 176 | 25 | 5x8<br>8x12 | 41250<br>2750 | 486500 | 140750 | 627250 | 15680 |
| 10 | ಕಾರ್ಗಲ್ | KSFMBC-M-4 | ಕಟ್ಟಿನಕಾರು ಬ್ಲಾಕ್–1 | 82, 164 | 25 | 5x8<br>8x12 | 41250<br>2750 | 486500 | 140750 | 627250 | 15680 |
| 11 | ಕಾರ್ಗಲ್ | KSFMBC-M-4 | ಕಟ್ಟಿನಕಾರು ಬ್ಲಾಕ್–2 | 82, 164 | 25 | 5x8<br>8x12 | 41250<br>2750 | 486500 | 140750 | 627250 | 15680 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 12 | ಕಾರ್ಗಲ್ | KSFMBC-M-4 | ಚನ್ನಗೊಂಡ ಬ್ಲಾಕ್–1 | 341, 277 | 25 | 5x8<br>8x12 | 41250<br>2750 | 486500 | 140750 | 627250 | 15680 |
| 13 | ಕಾರ್ಗಲ್ | KSFMBC-M-4 | ಚನ್ನಗೊಂಡ ಬ್ಲಾಕ್–2 | 341, 277 | 25 | 5x8 | 41250 | 486500 | 140750 | 627250 | 15680 |
| 14 | ಆನಂದಪುರಂ | KFDF-03-Other pltn | ಕೋಣೆಹೊಸೂರು | 5, 30 | 20 | 5x8<br>6x9 | 8800<br>26400 | 370000 | – | 370000 | 9250 |
| 15 | ಆನಂದಪುರಂ | KSFMBC-M-2 | ಹಿರೇಹರಕ ಬ್ಲಾಕ್–1 | 44 | 25 | 8x12 | 11000 | 350000 | 91500 | 441500 | 11050 |
| 16 | ಆನಂದಪುರಂ | KSFMBC-M-2 | ಹಿರೇಹರಕ ಬ್ಲಾಕ್–2 | 44 | 25 | 8x12 | 11000 | 350000 | 91500 | 441500 | 11050 |
| 17 | ಆನಂದಪುರಂ | KSFMBC-M-3 | ಹಿರೇಹರಕ ಬ್ಲಾಕ್–1 | 44 | 20 | 6x9<br>8x12 | 8800<br>8800 | 378000 | 105000 | 483000 | 12075 |
| 18 | ಆನಂದಪುರಂ | KSFMBC-M-3 | ಹಿರೇಹರಕ ಬ್ಲಾಕ್–2 | 44 | 20 | 6x9<br>8x12 | 8800<br>8800 | 378000 | 105000 | 483000 | 12075 |
| 19 | ಆನಂದಪುರಂ | KSFMBC-M-4 | ಬೈರಾಪುರ ಬ್ಲಾಕ್–1 | 83, 84 | 25 | 5x8<br>8x12 | 41250<br>2750 | 486500 | 140750 | 627250 | 15680 |
| 20 | ಆನಂದಪುರಂ | KSFMBC-M-4 | ಬೈರಾಪುರ ಬ್ಲಾಕ್–2 | 83, 84 | 25 | 5x8<br>8x12 | 41250<br>2750 | 486500 | 140750 | 627250 | 15680 |
| 21 | ಸೊರಬ | KFDF-03-Other pltn | ಕ್ಯಾಸನೂರು | 55, | 25 | 5x8<br>6x9 | 11000<br>33000 | 462500 | – | 462500 | 11565 |
| 22 | ಆನವಟ್ಟಿ | KSFMBC-M-3 | ಹುರುಳಿ | 61 | 15 | 6x9<br>8x12 | 6600<br>6600 | 283500 | 78750 | 362250 | 9050 |
| 23 | ಆನವಟ್ಟಿ | KSFMBC-M-3 | ತಲ್ಲೂರು | 306 | 15 | 6x9<br>8x12 | 6600<br>6600 | 283500 | 78750 | 362250 | 9050 |
| 24 | ಆನವಟ್ಟಿ | KSFMBC-M-4 | ಹುರುಳಿ | 61, 225 | 25 | 5x8<br>8x12 | 41250<br>2750 | 486500 | 140750 | 627250 | 15680 |
| 25 | ಶಿಕಾರಿಪುರ | 11-Cop | ನಾಗೀಹಳ್ಳಿ | 27 | 25 | 5x8<br>6x9 | 22000<br>22000 | 462500 | – | 462500 | 11565 |
| 26 | ಶಿಕಾರಿಪುರ | KSFMBC-M-3 | ಮತ್ತಿಘಟ್ಟ–ಬ್ಲಾಕ್–1 | 4, 12 | 20 | 6x9<br>8x12 | 8800<br>8800 | 378000 | 105000 | 483000 | 12075 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 27 | ಶಿಕಾರಿಪುರ | KSFMBC-M-3 | ಮತ್ತಿಘಟ್ಟ–ಬ್ಲಾಕ್–2 | 4, 12 | 15 | 6x9<br>8x12 | 6600<br>6600 | 283500 | 78750 | 362250 | 9050 |
| 28 | ಶಿಕಾರಿಪುರ | KSFMBC-M-4 | ಚೋಡನಾಯ್ಕನಕೊಪ್ಪ | 42 | 20 | 5x8<br>8x12 | 33000<br>2200 | 389200 | 112600 | 501800 | 12500 |
| 29 | ಶಿಕಾರಿಪುರ | KSFMBC-M-4 | ಚೋಡನಾಯ್ಕನಕೊಪ್ಪ | 42 | 20 | 5x8<br>8x12 | 33000<br>2200 | 389200 | 112600 | 501800 | 12500 |
| 30 | ಶಿಕಾರಿಪುರ | KSFMBC-M-4 | ಮತ್ತಿಕೊಪ್ಪ–1 | 4, 12 | 20 | 5x8<br>8x12 | 33000<br>2200 | 389200 | 112600 | 501800 | 12500 |
| 31 | ಶಿಕಾರಿಪುರ | KSFMBC-M-4 | ಮತ್ತಿಕೊಪ್ಪ–1 | 4, 12 | 20 | 5x8<br>8x12 | 33000<br>2200 | 389200 | 112600 | 501800 | 12500 |
| 32 | ಶಿಕಾರಿಪುರ | KSFMBC-M-4 | ಹುಲುಗಿನಕೊಪ್ಪ–1 | 5, 6 | 20 | 5x8<br>8x12 | 33000<br>2200 | 389200 | 112600 | 501800 | 12500 |
| 33 | ಶಿಕಾರಿಪುರ | KSFMBC-M-4 | ಹುಲುಗಿನಕೊಪ್ಪ–2 | 5, 6 | 20 | 5x8<br>8x12 | 33000<br>2200 | 389200 | 112600 | 501800 | 12500 |
| 34 | ಶಿರಾಳಕೊಪ್ಪ | KFDF-03-Other pltn | ಮಂಚಿಕೊಪ್ಪ | 54, 55 | 25 | 5x8 | 11000<br>33000 | 462500 | – | 462500 | 11565 |
| 35 | ಶಿರಾಳಕೊಪ್ಪ | 11-Cop | ಹೆಸರೀಕೊಪ್ಪ | 2, 11 | 25 | 5x8<br>6x9 | 22000<br>22000 | 462500 | – | 462500 | 11565 |
| 36 | ಶಿರಾಳಕೊಪ್ಪ | KSFMBC-M-4 | ಮುತ್ತಗಿ | 37 | 25 | 5x8<br>8x12 | 41250 | 486500 | 140750 | 627250 | 15680 |
| 37 | ಶಿರಾಳಕೊಪ್ಪ | KSFMBC-M-4 | ಗುಡ್ಡೆಕೊಪ್ಪ | 112 | 25 | 5x8<br>8x12 | 2750 | 486500 | 140750 | 627250 | 15680 |
| 38 | ಶಿರಾಳಕೊಪ್ಪ | KSFMBC-M-4 | ಬಸವನಂದಿಹಳ್ಳಿ–1 | 72 | 25 | 5x8<br>8x12 | 41250<br>2750 | 486500 | 140750 | 627250 | 15680 |
| 39 | ಶಿರಾಳಕೊಪ್ಪ | KSFMBC-M-4 | ಬಸವನಂದಿಹಳ್ಳಿ–2 | 72 | 25 | 5x8<br>8x12 | 41250<br>2750 | 486500 | 140750 | 627250 | 15680 |
| 40 | ಅಂಬ್ಲಿಗೊಳ | KSFMBC-M-3 | ಕೊರ್ಲಿಕೊಪ್ಪ–ಬ್ಲಾಕ್–1 | 24, 25, 66, 69, 75 | 25 | 6x9<br>8x12 | 11000<br>11000 | 472500 | 131250 | 603750 | 15100 |

| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 41 | ಅಂಬ್ಲಿಗೊಳ | KSFMBC-M-3 | ಕೊರ್ಲಿಕೊಪ್ಪ–ಬ್ಲಾಕ್–2 | 24, 25, 66, 69, 75 | 25 | 6x9<br>8x12 | 11000<br>11000 | 472500 | 131250 | 603750 | 15100 |
| 42 | ಅಂಬ್ಲಿಗೊಳ | KSFMBC-M-4 | ಚಿಕ್ಕಸಾಲೂರು | 691, 829 | 25 | 5x8<br>8x12 | 41250<br>2750 | 486500 | 140750 | 627250 | 15680 |
| 43 | ಅಂಬ್ಲಿಗೊಳ | KSFMBC-M-4 | ಕುಡಿಗೆರೆ | 5, 124 | 25 | 5x8<br>8x12 | 41250<br>2750 | 486500 | 140750 | 627250 | 15680 |
| 44 | ಅಂಬ್ಲಿಗೊಳ | KSFMBC-M-4 | ಯರೇಕೊಪ್ಪ | 1 | 25 | 5x8<br>8x12 | 41250<br>2750 | 486500 | 140750 | 627250 | 15680 |
| 45 | ಹೊಸನಗರ | KFDF-03-Other pltn | ನೇರಲಮನೆ | 17 | 20 | 5x8<br>6x9 | 8800<br>26600 | 370000 | – | 370000 | 9250 |
| 46 | ಹೊಸನಗರ | KSFMBC-M-2 | ಮಾರುತಿಪುರ | 53, 54 | 25 | 8x12 | 11000 | 350000 | 91500 | 441500 | 11050 |
| 47 | ಹೊಸನಗರ | KSFMBC-M-2 | ಮುಳುಗುಡ್ಡೆ | 20 | 25 | 8x12 | 11000 | 350000 | 91500 | 441500 | 11050 |
| 48 | ಹೊಸನಗರ | KSFMBC-M-3 | ಕೆ.ಹುಣಸವಳ್ಳಿ | 68, 69 | 25 | 6x9<br>8x12 | 11000<br>11000 | 472500 | 131250 | 603750 | 15100 |
| 49 | ಹೊಸನಗರ | KSFMBC-M-3 | ಕಾರಕ್ಕಿ | 9 | 25 | 6x9<br>8x12 | 11000<br>11000 | 472500 | 131250 | 603750 | 15100 |
| 50 | ಹೊಸನಗರ | KSFMBC-M-4 | ಕಾರಕ್ಕಿ | 9, 64 | 25 | 5x8<br>8x12 | 33000<br>2200 | 389200 | 112600 | 501800 | 12550 |
| 51 | ನಗರ | KSFMBC-M-2 | ಅರಮನೆಕೊಪ್ಪ | 203, 227 | 25 | 8x12 | 11000 | 350000 | 91500 | 441500 | 11050 |
| 52 | ನಗರ | KSFMBC-M-3 | ಅರಮನೆಕೊಪ್ಪ, ಬ್ಲಾಕ್–1 | 122 | 25 | 6x9<br>8x12 | 11000<br>11000 | 472500 | 131250 | 603750 | 15100 |
| 53 | ನಗರ | KSFMBC-M-3 | ಅರಮನೆಕೊಪ್ಪ, ಬ್ಲಾಕ್–2 | 122 | 20 | 6x9<br>8x12 | 8800<br>8800 | 378000 | 105000 | 483000 | 12075 |
| 54 | ನಗರ | KSFMBC-M-4 | ಅರಮನೆಕೊಪ್ಪ | 20 | 25 | 5x8<br>8x12 | 41250<br>2750 | 486500 | 140750 | 627250 | 15680 |

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ

ಪಿ.ಆರ್. 945

## ಭದ್ರಾವತಿ ಅರಣ್ಯ ವಿಭಾಗ

## ಅಲ್ಪಾವಧಿ ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ. ಎ2–ಬಿಯುಡಿ–ಸಿಆರ್– 5/2009–10, ದಿನಾಂಕ: 9ನೇ ನವೆಂಬರ್ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2009–10 ನೇ ಸಾಲಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ವಲಯದ ಅರಣ್ಯ ಪ್ರದೇಶಗಳಲ್ಲಿ ಹೆಚ್ಚುವರಿ ನೆಡುತೋಪು ರಚನೆ ಮಾಡಲು ಮುಂಗಡ ರಿಪ್ಪಿಂಗ್ ಕಾಮಗಾರಿ, ಜಾನುವಾರು ನಿರೋಧಕ ಕಂದಕ ಮತ್ತು ಗುಂಡಿ ತೆಗೆಯುವುದು, ಮಣ್ಣು ಮತ್ತು ತೇವಾಂಶ ಸಂರಕ್ಷಣೆ ಹಾಗೂ ಸಸಿ ಬೆಳೆಸಲು ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣು ಸರಬರಾಜು ಮಾಡುವ ಮತ್ತು ಸಸಿ ಬೆಳೆಸುವ ಮತ್ತು ಸಿವಿಲ್ ಕಾಮಗಾರಿಗಳಾದ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ನಿರ್ವಹಿಸಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಅರಣ್ಯ ಗುತ್ತಿಗೆದಾರರು ದಿ:27.11.2009 ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ಅರಣ್ಯ ವಿಭಾಗ, ಭದ್ರಾವತಿ ಇವರಿಗೆ ಸಲ್ಲಿಸಲು ಕೋರಿದೆ ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅಂದೇ ಅಪರಾಹ್ನ 4.00 ಗಂಟೆಗೆ ತೆರೆಯಲಾಗುವುದು.

ಒಂದು ವೇಳೆ ಮೇಲೆ ಹೇಳಿದ ದಿನಾಂಕದಂದು ಯಾವ ಗುತ್ತಿಗೆದಾರರು ಟೆಂಡರ್ ಹಾಕದಿದ್ದಲ್ಲಿ ಇದೇ ಟೆಂಡರ್ ಪ್ರಕ್ರಿಯೆಯ ಮರು ಟೆಂಡರನ್ನು ದಿನಾಂಕ: 04–12–2009 ರಂದು ಅಪರಾಹ್ನ 3.00 ಗಂಟೆಯೊಳಗೆ ಕರೆಯಲಾಗಿದೆ ಎಂದು ಭಾವಿಸತಕ್ಕದ್ದು. ಈ ಬಗ್ಗೆ ಪ್ರತ್ಯೇಕ ಅಧಿಸೂಚನೆ ಹೊರಡಿಸಲಾಗುವುದಿಲ್ಲ ಮತ್ತು ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅದೇ ದಿನ ಮದ್ಯಾಹ್ನ 4.00 ಗಂಟೆಗೆ ತೆರೆಯಲಾಗುವುದು.

| ಘಟಕದ ನಂ. | ವಲಯದ ಹೆಸರು | ಯೋಜನೆ ಹೆಸರು/ ಮಾದರಿ | ಕಾಮಗಾರಿಗಳ ಕ್ರ. ಸಂ. | ಕಾಮಗಾರಿ ಪ್ರದೇಶದ ಹೆಸರು | ವಿಸ್ತೀರ್ಣ | ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. ಮೊತ್ತ ರೂ.ಗಳಲ್ಲಿ |
|---|---|---|---|---|---|---|---|
| 1 | | 2 | | 5 | 7 | 8 | 9 |
| 1 | ಭದ್ರಾವತಿ | ಕೆ.ಎಸ್.ಎಫ್.ಎಂ.ಬಿ.ಸಿ. 139 ಮೇಜರ್ ವರ್ಕ್ಸ್ ಮಾದರಿ–2 | 1 | ಲಕ್ಕಪ್ಪನ ಕ್ಯಾಂಪ್ ಗ್ರಾ.ಅ.ಸ. ಕೂಡ್ಲಿಗೆರೆ ಸ.ನಂ.66 ಬ್ಲಾ–1 | 25 ಹೆ. | 4.415 | 9000 |
| 2 | ಉಂಬ್ಳೆಬೈಲು | ಕೆ.ಎಸ್.ಎಫ್.ಎಂ.ಬಿ.ಸಿ. 139 ಮೇಜರ್ ವರ್ಕ್ಸ್ ಮಾದರಿ–2 | 2 | ಹುಣಸೇಕಟ್ಟೆ– ಸ.ನಂ.14,ಬ್ಲಾ–1 | 25 ಹೆ. | 4.415 | 9000 |
| | | | 3 | ಹುಣಸೇಕಟ್ಟೆ–ಸ.ನಂ.14, ಬ್ಲಾ–2 | 25 ಹೆ. | 4.415 | 9000 |
| | | ಮಾದರಿ–3 | 4 | ಸಿದ್ದೇಶ್ವರನಗರ ಗ್ರಾ.ಅ.ಸ. ಯರಗನಾಳ್ ಸ.ನಂ.29 | 25 ಹೆ. | 6.037 | 12000 |
| 3 | ಶಾಂತಿಸಾಗರ | ಕೆ.ಎಸ್.ಎಫ್.ಎಂ.ಬಿ.ಸಿ. 139 ಮೇಜರ್ ವರ್ಕ್ಸ್ ಮಾದರಿ–2 | 5 | ಶಿವಗಂಗೆಹಾಳ್ ಗ್ರಾ.ಅ.ಸ. ಇಟ್ಟಿಗೆ ಹಳ್ಳಿ ಸ.ನಂ.20 ಬ್ಲಾ–1 | 25 ಹೆ. | 4.415 | 9000 |
| | | | 6 | ಶಿವಗಂಗೆಹಾಳ್ ಗ್ರಾ.ಅ.ಸ– ಇಟ್ಟಿಗೆ ಹಳ್ಳಿ ಸ.ನಂ.20 ಬ್ಲಾ–2 | 25 ಹೆ. | 4.415 | 9000 |
| | | | 7 | ತಿಮ್ಲಾಪುರ ಗ್ರಾ.ಅ.ಸ. ಗಡಮ ಘಟ್ಟ ಸ.ನಂ.34,35 – ಬ್ಲಾ–1 | 25 ಹೆ. | 4.415 | 9000 |
| | | ಮಾದರಿ–4 | 8 | ಹೊನ್ನನಾಯಕನಹಳ್ಳಿ–ಬ್ಲಾ–1 ಗಂಟ್ಯಾಪುರ | 25 ಹೆ. | 6.225 | 12500 |
| 4 | ಚನ್ನಗಿರಿ | ಕೆ.ಎಸ್.ಎಫ್.ಎಂ.ಬಿ.ಸಿ. 139ಮೇಜರ್ ವರ್ಕ್ಸ್ ಮಾದರಿ–2 | 9 | ಕೆ.ಹೊಸಳ್ಳೀ ಗ್ರಾ.ಅ.ಸ. ಅಮ್ಮನಗುಡಿ ಬ್ಲಾ–1 | 25 ಹೆ. | 4.415 | 9000 |
| | | | 10 | ಕೆ.ಹೊಸಳ್ಳೀ ಗ್ರಾ.ಅ.ಸ. ಅಮ್ಮನಗುಡಿ ಬ್ಲಾ–2 | 25 ಹೆ. | 4.415 | 9000 |

| ಘಟಕದ ನಂ. | ವಲಯದ ಹೆಸರು | ಯೋಜನೆ ಹೆಸರು/ ಮಾದರಿ | ಕಾಮಗಾರಿಗಳ ಕ್ರ. ಸಂ. | ಕಾಮಗಾರಿ ಪ್ರದೇಶದ ಹೆಸರು | ವಿಸ್ತೀರ್ಣ | ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. ಮೊತ್ತ ರೂ.ಗಳಲ್ಲಿ |
|---|---|---|---|---|---|---|---|
| 1 | | 2 | | 5 | 7 | 8 | 9 |
| 5 | ತರೀಕೆರೆ | ಕೆ.ಎಸ್.ಎಫ್.ಎಂ.ಬಿ.ಸಿ. 139 ಮೇಜರ್ ವರ್ಕ್ಸ್ | 11 | ತ್ಯಾಗದಬಾಗಿ ಸ.ನಂ. | 25 ಹೆ. | 4.415 | 9000 |
| | | ಮಾದರಿ–4 | 12 | ತ್ಯಾಗದಬಾಗಿ ಸ.ನಂ.61 ಬ್ಲಾ–1 | 25 ಹೆ. | 6.037 | 12000 |
| | | | 13 | ತ್ಯಾಗದಬಾಗಿ ಸ.ನಂ.61 ಬ್ಲಾ–2 | 25 ಹೆ. | 6.037 | 12000 |
| 6 | ಲಕ್ಕವಳ್ಳಿ | ಮಾದರಿ–4 | 14 | ಅರಸೀಕರೆ ಬಿ.ಕಾಲೋನಿ ಬ್ಲಾ–1 | 25 ಹೆ. | 6.225 | 12500 |
| | | | 15 | ಅರಸೀಕೆರೆ ಬಿ.ಕಾಲೋನಿ ಬ್ಲಾ–2 | 25 ಹೆ. | 6.225 | 12500 |
| 7 | ಅಜ್ಜಂಪುರ | ಕೆ.ಎಸ್.ಎಫ್.ಎಂ.ಬಿ.ಸಿ. 139 ಮೇಜರ್ ವರ್ಕ್ಸ್ ಮಾದರಿ–4 | 16 | ಹಣ್ಣೆ ಬ್ಲಾ–1, ರಂಗಾಪುರ ಗ್ರಾ.ಅ.ಸ. | 25 ಹೆ. | 6.225 | 12500 |
| | | | 17 | ಹಣ್ಣೆ ಬ್ಲಾ–2, ರಂಗಾಪುರ ಗ್ರಾ.ಅ.ಸ. | 25 ಹೆ. | 6.225 | 12500 |
| | | ಮಾದರಿ–2 | 18 | ಹಣ್ಣೆ ಎಸ್.ಎಫ್. ಬ್ಲಾ–1 | 25 ಹೆ. | 4.415 | 9000 |
| | | ಮಾದರಿ–2 | 19 | ಹಣ್ಣೆ ಎಸ್.ಎಫ್. ಬ್ಲಾ–1 | 25 ಹೆ. | 4.415 | 9000 |
| 1 | ಭದ್ರಾವತಿ | ಕೆ.ಎಸ್.ಎಫ್.ಎಂ.ಬಿ.ಸಿ. 132 ಬಂಡವಾಳ ವೆಚ್ಚಗಳು | 1 | ಭದ್ರಾವತಿಯಲ್ಲಿ 1 ಸಿಬ್ಬಂದಿ ವಾಸದ ಕಟ್ಟಡ ನಿರ್ಮಾಣ | 1 ಸಂ. | 6.400 | 16000 |
| 2 | ಅಜ್ಜಂಪುರ | ಕೆ.ಎಸ್.ಎಫ್.ಎಂ.ಬಿ.ಸಿ. 132 ಬಂಡವಾಳ ವೆಚ್ಚಗಳು | 2 | ಅಜ್ಜಂಪುರದಲ್ಲಿ ವಲಯ ಅರಣ್ಯಾಧಿಕಾರಿಗಳ ವಾಸದ ಕಟ್ಟಡ ನಿರ್ಮಾಣ | 1 ಸಂಖ್ಯೆ | 8.00 | 20000 |

**ನಿಬಂಧನೆಗಳು:**

1 ಟೆಂಡರ್ ಹಾಕಲು ಇಚ್ಚಿಸುವ ಗುತ್ತಿಗೆದಾರರು ಎರಡು ಕವರ್ ಸಿಸ್ಟಮ್‌ನಲ್ಲಿ ಟೆಂಡರ್‌ಗಳನ್ನು ಹಾಕಬೇಕು. ಒಂದು ಕವರನ್ನು ಟೆಕ್ನಿಕಲ್ ಬಿಡ್ ಕವರ್ ಎಂದು ಇನ್ನೊಂದನ್ನು ಫೈನಾನ್ಸಿಯಲ್ ಬಿಡ್ ಕವರ್ ಎಂದು ಕರೆಯಲಾಗುವುದು. ಟೆಕ್ನಿಕಲ್ ಬಿಡ್ ಕವರಿನಲ್ಲಿ ಗುತ್ತಿಗೆದಾರರು ತಾಂತ್ರಿಕತೆ ಹಾಗೂ ಅವರಿಗೆ ನಿಗದಿಪಡಿಸಿದ ಅನುಭವಗಳನ್ನೊಳಗೊಂಡಂತೆ ಪ್ರಮಾಣ ಪತ್ರಗಳನ್ನು ಇಡುವುದು. ಫೈನಾನ್ಸಿಯಲ್ ಬಿಡ್ ಕವರಿನಲ್ಲಿ ಟೆಂಡರಿಗೆ ಸಂಬಂಧಿಸಿದಂತೆ ಟೆಂಡರ್ ಫಾರ್ಮನ್ನು ಪೂರ್ಣವಾಗಿ ಭರ್ತಿ ಮಾಡಿ ಯುನಿಟ್ ದರಕ್ಕೆ ಸಮನಾಗಿ/ಕಡಿಮೆ/ಹೆಚ್ಚು ಪ್ರತಿಶತ ದರಗಳನ್ನು ಸೂಚಿಸಿ ಹಾಕುವುದು. ಸಿವಿಲ್ ಕಾಮಗಾರಿಯಾದ ಕಟ್ಟಡ ನಿರ್ಮಾಣ ಮತ್ತು ಅರಣ್ಯ ಕಾಮಗಾರಿಗಳಿಗೆ ಪ್ರತ್ಯೇಕ ಟೆಂಡರ್ ಫಾರಂ ಹಾಕಬೇಕು.

2 ಟೆಂಡರ್ ಹಾಕಲು ಇಚ್ಚಿಸುವ ಗುತ್ತಿಗೆದಾರರು ಒಂದಕ್ಕಿಂತ ಹೆಚ್ಚು ಟೆಂಡರ್ ಹಾಕಲು ಇಚ್ಚಿಸಿದಲ್ಲಿ ಒಂದೇ ಟೆಕ್ನಿಕಲ್ ಬಿಡ್ ಕವರನ್ನು ಹಾಕುವುದು. ಆದರೆ, ಫೈನಾನ್ಸಿಯಲ್ ಬಿಡ್‌ನ್ನು ಪ್ರತಿ ಘಟಕಕ್ಕೆ ಒಂದರಂತೆ ಹಾಕಬೇಕಾಗುವುದು.

3 ಮೊದಲಿಗೆ ಟೆಕ್ನಿಕಲ್ ಬಿಡ್ ಕವರನ್ನು ಒಡೆದು ಅದರಲ್ಲಿಯ ವಿವರಗಳನ್ನು ಪರಿಶೀಲಿಸಿ ಅ. ನಂ. 7 ರಲ್ಲಿ ನಿಗದಿಪಡಿಸಿದ ಅನುಭವಗಳನ್ನು ಹೊಂದಿದವರ ಹಾಗೂ ಅ.ನಂ. 8 ರಲ್ಲಿ ನಿಗದಿಪಡಿಸಿದ ದಾಖಲೆ ಅಥವಾ ಪ್ರಮಾಣ ಪತ್ರಗಳನ್ನು ಪೂರ್ಣ ಪ್ರಮಾಣದಲ್ಲಿ ಒದಗಿಸಿದಂತಹ ಗುತ್ತಿಗೆದಾರರು ಹಾಕಿದಂತಹ ಫೈನಾನ್ಸಿಯಲ್ ಬಿಡ್ ಕವರ್‌ಗಳನ್ನು ಮಾತ್ರ ತೆರೆಯಲಾಗುವುದು. ಉಳಿದ ಕವರ್‌ಗಳನ್ನು ತೆರೆಯಲಾಗುವುದಿಲ್ಲ.

4 ಟೆಂಡರನ್ನು ದಿನಾಂಕ: 27–11–2009 ರಂದು ಅಪರಾಹ್ನ 3.00 ಘಂಟೆಯವರೆಗೆ ಈ ಕಛೇರಿಯಲ್ಲಿ ಇಟ್ಟಿರುವ ಮೊಹರಾದ ಪೆಟ್ಟಿಗೆಯಲ್ಲಿ ಹಾಕಬಹುದು. ಟೆಂಡರ್ ಹಾಕಲು ಇಚ್ಚೆಯುಳ್ಳ ನೊಂದಾಯಿತ ಅರಣ್ಯ ಗುತ್ತಿಗೆದಾರರು ಟೆಂಡರ್ ಫಾರ್ಮನ್ನು ದಿನಾಂಕ: 27–11–2009 ರ ಅಪರಾಹ್ನ 1.00 ಘಂಟೆಯವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ರೂ. 200 ಮತ್ತು ಇತರೇ ತೆರಿಗೆಗಳನ್ನು ಪಾವತಿಸಿ ಈ ಕಛೇರಿಯಿಂದ ಪಡೆದುಕೊಳ್ಳಬಹುದಾಗಿದೆ. ಟೆಂಡರ್ ಫಾರಂಗಳನ್ನು ವರ್ಗಾಯಿಸುವಂತಿಲ್ಲ. ಸಿವಿಲ್ ಕಾಮಗಾರಿಯಾದ ಕಟ್ಟಡ ನಿರ್ಮಾಣ ಮತ್ತು ಅರಣ್ಯ ಕಾಮಗಾರಿಗಳಿಗೆ ಪ್ರತ್ಯೇಕ ಟೆಂಡರ್ ಫಾರಂ ಹಾಕಬೇಕು.

5 ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ: 27–11–2009 ರಂದು ಈ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಅಪರಾಹ್ನ 4.00 ಘಂಟೆಗೆ ಹಾಜರು ಇರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆಗೆಯಲಾಗುವುದು.

6 ಈ ಟೆಂಡರ್ ಪ್ರಕಟಣೆಯಲ್ಲಿ ಕೈಗೊಳ್ಳಬೇಕಾಗಿರುವ ಅರಣ್ಯ ಕಾಮಗಾರಿಗಳನ್ನು ದಿನಾಂಕ: 28–02–2010 ಮತ್ತು ಸಿವಿಲ್ ಕಾಮಗಾರಿಯಾದ ಕಟ್ಟಡ ನಿರ್ಮಾಣವನ್ನು ದಿನಾಂಕ:15–03–2010 ರೊಳಗೆ ಮುಕ್ತಾಯಗೊಳಿಸಬೇಕಾಗುತ್ತದೆ.

7 **ಈ ಗುತ್ತಿಗೆಯಲ್ಲಿ ನಿಗದಿಪಡಿಸಿದ ಕೆಲಸ ಕಾರ್ಯಗಳು ವಿಶೇಷವಾದ ಅರಣ್ಯೀಕರಣ ಕೆಲಸಗಳಾಗಿದ್ದು, ಅವುಗಳನ್ನು ನಿರ್ವಹಿಸಲು ಕೆಲವೊಂದು ಅನುಭವದ ಅವಶ್ಯಕತೆ ಇರುವ ಕಾರಣ ಈ ಕೆಳಗಿನ ಯಾವುದಾದರೂ ಒಂದು ಷರತ್ತನ್ನು ಹೊಂದಿರುವಂತಹ ಗುತ್ತಿಗೆದಾರರನ್ನು ಮಾತ್ರ ಪರಿಗಣಿಸಲಾಗುವುದು.**

ಅ) ಅರಣ್ಯೀಕರಣ ಕೆಲಸಗಳಲ್ಲಿ ಕನಿಷ್ಠ ಮೂರು ವರ್ಷ ಅನುಭವ ಹೊಂದಿರುವ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಗಿಂತ ಕಡಿಮೆ ಇಲ್ಲದ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ ಹೊಂದಿರಬೇಕು.

ಆ) ಅರಣ್ಯ ಇಲಾಖೆಯಲ್ಲಿ ಸೇವೆ ಸಲ್ಲಿಸಿ ಅರಣ್ಯೀಕರಣ ಕಾಮಗಾರಿಗಳನ್ನು ನಿರ್ವಹಿಸಿದ ಅನುಭವ ಇದ್ದಲ್ಲಿ ಅದಕ್ಕೆ ಸಂಬಂಧಿಸಿದ ಸೇವೆ ಸಲ್ಲಿಸಿದ ವಿವರಗಳನ್ನು ಹಾಜರುಪಡಿಸಿದಲ್ಲಿ ಇದನ್ನು ಅನುಭವವೆಂದು ಪರಿಗಣಿಸಲಾಗುವುದು.

8 **ಟೆಕ್ನಿಕಲ್ ಕವರ್ ಜೊತೆ ಇಡಬೇಕಾದ ಅವಶ್ಯ ದಾಖಲೆಗಳು**

ಅ) ಈ ವಿಭಾಗದಲ್ಲಿ ಟೆಂಡರ್ ಹಾಕುವ ಮೊದಲು ಅರಣ್ಯ ಗುತ್ತಿಗೆದಾರರೆಂದು ನೊಂದಣಿ ಮಾಡಿದ್ದಕ್ಕೆ ಚಾಲ್ತಿಯಲ್ಲಿದ್ದ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

ಆ) ಆದಾಯ ತೆರಿಗೆ 1961 ನೇದರ ಕಾಯ್ದೆ ಮತ್ತು ನಿಯಮಗಳ ಅಡಿಯಲ್ಲಿ ಆದಾಯ ತೆರಿಗೆ ಇಲಾಖೆಯಿಂದ ಪಡೆದ TAN/PAN ನಂಬರ್ ಹೊಂದಿದವರಾಗಿರಬೇಕು. ಅದರ ಧೃಡೀಕೃತ ಪ್ರತಿಯನ್ನು ಟೆಕ್ನಿಕಲ್ ಟೆಂಡರ್ ಲಕೋಟೆಯಲ್ಲಿ ಇಡತಕ್ಕದ್ದು.

ಇ) ಕರ್ನಾಟಕ ವ್ಯಾಟ್ (KVAT) ನಂಬರನ್ನು ನಿಯಮಾವಳಿಗಳ ಪ್ರಕಾರ ಟಿನ್ (TIN) ನಂಬರನ್ನು ಪಡೆದವರಾಗಿರಬೇಕು. ಟಿನ್ (TIN) ನಂಬರ್ ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಟೆಕ್ನಿಕಲ್ ಟೆಂಡರ್ ಲಕೋಟೆಯಲ್ಲಿ ಇಡತಕ್ಕದ್ದು.

ಈ) ಈ ಅರಣ್ಯೀಕರಣ ಕೆಲಸಗಳನ್ನು ಋತುಮಾನಕ್ಕೆ ತಕ್ಕಂತೆ ನಿರ್ವಹಿಸಬೇಕಾಗಿರುವುದರಿಂದ ಸಾಕಷ್ಟು ಹಣಕಾಸಿನ ಅವಶ್ಯಕತೆ ಇರುವ ಕಾರಣ ಗುತ್ತಿಗೆದಾರರು ಅರಣ್ಯ ಕಾಮಗಾರಿಗಾಗಿ ಕನಿಷ್ಠ ರೂ. 500000–00 ಮತ್ತು ಸಿವಿಲ್ ಕಾಮಗಾರಿಯಾದ ಕಟ್ಟಡ ನಿರ್ಮಾಣಕ್ಕೆ 30000–00 ಬ್ಯಾಂಕ್ ಬ್ಯಾಲೆನ್ಸ್/ಠೇವಣಿ/ ಬ್ಯಾಂಕ್‌ನಿಂದ ಸಾಲ ಪಡೆಯುವ ಬಗ್ಗೆ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್ ಅಥವಾ ಶೆಡ್ಯೂಲ್ಡ್ ಬ್ಯಾಂಕ್‌ನವರಿಂದ ಖಾತ್ರಿ ಪ್ರಮಾಣ ಪತ್ರ ಹೊಂದಿರತಕ್ಕದ್ದು ಹಾಗೂ ಪತ್ರದ ನಕಲು ಇಡುವುದು.

ಉ) ಅರಣ್ಯೀಕರಣ ಕೆಲಸಗಳನ್ನು ಮಾಡಲು ಹೆಚ್ಚಾಗಿ ನುರಿತ ಕೆಲಸಗಾರರ ಅವಶ್ಯಕತೆ ಇರುವ ಕಾರಣ ಗುತ್ತಿಗೆದಾರರು ಲೇಬರ್ ಆ್ಯಕ್ಟ್ ನಿಯಮಾವಳಿಗಳ ಅನುಸಾರ ನೊಂದಾಯಿಸಿದ ಕೂಲಿಕಾರರ ವಿವರವನ್ನು ಟೆಕ್ನಿಕಲ್ ಲಕೋಟೆಯಲ್ಲಿ ಇಡುವುದು.

ಊ) ಗುತ್ತಿಗೆದಾರರು ವಿಶೇಷ ಸೌಲಭ್ಯ (ವಾಹನ, ಟ್ರ್ಯಾಕ್ಟರ್) ಇದ್ದಲ್ಲಿ ನಮೂದಿಸಿ ಟೆಕ್ನಿಕಲ್ ಕವರ್‌ನಲ್ಲಿ ಇಡುವುದು.

ಋ) ವಿಳಾಸ ಖಾತ್ರಿಗಾಗಿ ಕಳೆದ ಎರಡು ತಿಂಗಳುಗಳಲ್ಲಿ ಪಡೆದಂತಹ ಟೆಲಿಫೋನ್ ಬಿಲ್ ಅಥವಾ ಚುನಾವಣಾ ಗುರುತಿನ ಚೀಟಿ ಅಥವಾ ಪಡಿತರ ಚೀಟಿ ಅಥವಾ ಬ್ಯಾಂಕಿನಿಂದ ಪಡೆದಂತಹ ಪಾಸ್ ಬುಕ್ ಅಥವಾ ಸ್ಥಳೀಯ ನಗರಸಭೆ/ಪುರಸಭೆ/ಗ್ರಾಮ ಪಂಚಾಯತ್/ಕಂದಾಯ ಇಲಾಖೆಯಿಂದ ಪಡೆದಂತಹ ವಿಳಾಸ ಹೊಂದಿದ ಪ್ರಮಾಣ ಪತ್ರದ ನಕಲು ಇಡುವುದು.

ಓ) ಅರಣ್ಯೀಕರಣ ಕೆಲಸಗಳಲ್ಲಿ ಕನಿಷ್ಠ ಮೂರು ವರ್ಷ ಅನುಭವ ಹೊಂದಿರುವ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಗಿಂತ ಕಡಿಮೆ ಇಲ್ಲದ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ ಟೆಕ್ನಿಕಲ್ ಕವರ್‌ನಲ್ಲಿಡಬೇಕು.

**ಅರಣ್ಯ ಇಲಾಖೆ**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು–560003**

**ಅಧಿಸೂಚನೆ**

**ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಅಭ್ಯರ್ಥಿಗಳಿಂದ ಶೀಘ್ರಲಿಪಿಗಾರ, ದ್ವಿತೀಯ ದರ್ಜೆ ಸಹಾಯಕ ಮತ್ತು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳಿಗೆ ನೇರ ನೇಮಕಾತಿ**

**ಸಂಖ್ಯೆ: ಬಿ9–ಬ್ಯಾಕ್‌ಲಾಗ್–ನೇಮಕಾತಿ–ವಿವ–3/2009–10 ದಿನಾಂಕ: 16ನೇ ನವೆಂಬರ್ 2009**

ಅರಣ್ಯ ಇಲಾಖೆಯಲ್ಲಿ ಶೀಘ್ರಲಿಪಿಗಾರ, ದ್ವಿತೀಯ ದರ್ಜೆ ಸಹಾಯಕ ಮತ್ತು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳಿಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದವರಿಗೆ ಕಾಯ್ದಿರಿಸಿದ ಹುದ್ದೆಗಳಲ್ಲಿ ಭರ್ತಿಯಾಗದೆ ಖಾಲಿ ಇರುವ ಹುದ್ದೆಗಳಿಗೆ)(ವಿಶೇಷ ನೇಮಕಾತಿ) ನಿಯಮಗಳು, 2001 ರನ್ವಯ ನೇರ ನೇಮಕಾತಿಗಾಗಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**1.0 ಅರ್ಜಿ ನಮೂನೆ**

ಹುದ್ದೆವಾರು ಅರ್ಜಿ ನಮೂನೆಯನ್ನು ಈ ಅಧಿಸೂಚನೆಯೊಂದಿಗೆ ಲಗತ್ತಿಸಿದೆ ಮತ್ತು ಹುದ್ದೆವಾರು ಅರ್ಜಿ ನಮೂನೆಯ ಮಾದರಿಯನ್ನು ಅಭ್ಯರ್ಥಿಗಳು ರಾಜ್ಯದ ಎಲ್ಲಾ ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ) ಇವರ ಕಚೇರಿಗಳಿಂದ ಉಚಿತವಾಗಿ ಪಡೆಯಬಹುದು. ಅಭ್ಯರ್ಥಿಗಳು ಅಧಿಸೂಚನೆ ಹಾಗೂ ನಿಗದಿತ ಅರ್ಜಿ ನಮೂನೆಯನ್ನು ಇಲಾಖಾ ವೆಬ್‌ಸೈಟ್: **www.karnatakaforest.gov.in** ನಿಂದಲೂ ಸಹ ಡೌನ್‌ಲೋಡ್ ಮಾಡಿಕೊಳ್ಳಬಹುದು. ನಿಗದಿತ ನಮೂನೆಯ ಅರ್ಜಿಯಲ್ಲಿ ಮಾಹಿತಿಗಳನ್ನು ಆಂಗ್ಲ ಭಾಷೆಯ Capital letters ಗಳಲ್ಲಿ ಅಥವಾ ಕನ್ನಡ ಭಾಷೆಯ ದಪ್ಪ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದು ಅಥವಾ ಬೆರಳಚ್ಚು ಮಾಡಿಸಿ ಸಲ್ಲಿಸತಕ್ಕದ್ದು. **ಅರ್ಜಿ ನಮೂನೆಗಳು ಮಾರಾಟಕ್ಕೆ ಲಭ್ಯವಿರುವುದಿಲ್ಲ.**

**2.0 ಅರ್ಜಿ ಸಲ್ಲಿಸುವ ವಿಧಾನ ಮತ್ತು ಸಲ್ಲಿಸಬೇಕಾದ ವಿಳಾಸ**

**2.1** ನಿಗದಿತ ನಮೂನೆಯ ಅರ್ಜಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಪೂರ್ಣವಾಗಿ ಭರ್ತಿ ಮಾಡಿ, ಭರ್ತಿ ಮಾಡಿದ ಅರ್ಜಿಯನ್ನು ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲೆ **"ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಶೀಘ್ರಲಿಪಿಗಾರ/ದ್ವಿತೀಯ ದರ್ಜೆ ಸಹಾಯಕ/ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ"** ಎಂದು ಸ್ಪಷ್ಟವಾಗಿ ನಮೂದಿಸಿ, ತಕ್ಕ ಮೌಲ್ಯದ ಅಂಚೆ ಚೀಟಿ ಅಂಟಿಸಿ, **ಸಾಧಾರಣ ಅಂಚೆ ಮುಖಾಂತರ ಮಾತ್ರ** ಈ ಕೆಳಗೆ ನಮೂದಿಸಿರುವ ವಿಳಾಸಕ್ಕೆ ಕಳುಹಿಸಬೇಕು.

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಆಯ್ಕೆ ಪ್ರಾಧಿಕಾರ,**
**1ನೇ ಮಹಡಿ, ಅರಣ್ಯ ಭವನ, 18ನೇ ಕ್ರಾಸ್,**
**ಮಲ್ಲೇಶ್ವರಂ, ಬೆಂಗಳೂರು–560003.**

ಇತರೆ ನಮೂನೆಗಳಲ್ಲಿ ಭರ್ತಿ ಮಾಡಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಒಂದು ವೇಳೆ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅಂಚೆ ಮೂಲಕ ಸ್ವೀಕೃತವಾಗದೇ ಇದ್ದಲ್ಲಿ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗುವುದಿಲ್ಲ. ಅರ್ಜಿ ತಲುಪಿದ ಬಗ್ಗೆ ಯಾವುದೇ ಸ್ವೀಕೃತಿಯನ್ನು ನೀಡಲಾಗುವುದಿಲ್ಲ. ಯಾವುದೇ ಕಾರಣಕ್ಕೂ ಕೊರಿಯರ್, ನೊಂದಾಯಿತ ಅಂಚೆ, ಮುದ್ದಾಂ, ಇತ್ಯಾದಿ ವಿಧಾನಗಳ ಮುಖಾಂತರ ಅರ್ಜಿಗಳನ್ನು ಕಳುಹಿಸಬಾರದು ಮತ್ತು ಈ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಸ್ವೀಕರಿಸುವ ವ್ಯವಸ್ಥೆ ಸಹ ಇರುವುದಿಲ್ಲ.

**2.2** ಅರ್ಜಿಯ ಜೊತೆಗೆ ಯಾವುದೇ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಅಥವಾ ಅವುಗಳ ಜೆರಾಕ್ಸ್ ಪ್ರತಿಗಳು, ಇತ್ಯಾದಿಗಳನ್ನು ಸಲ್ಲಿಸಬೇಕಾಗಿರುವುದಿಲ್ಲ. ಒಂದು ವೇಳೆ, ಸಲ್ಲಿಸಿ, ಅವು ಕಳೆದು ಹೋದರೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಾಗುವುದಿಲ್ಲ. ಆದರೆ ಅಭ್ಯರ್ಥಿಯು ನಿಗದಿತ ನಮೂನೆಯಲ್ಲಿರುವ ಅರ್ಜಿಯನ್ನು ಭರ್ತಿ ಮಾಡುವ ವೇಳೆಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ಅವಶ್ಯಕವಿರುವ ಎಲ್ಲಾ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಪಡೆದುಕೊಂಡು ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳಲ್ಲಿರುವ ಮಾಹಿತಿಯನ್ನು ಸರಿಯಾಗಿ, ಸ್ಪಷ್ಟವಾಗಿ ಮತ್ತು ಸಮರ್ಪಕವಾಗಿ ನಿಗದಿತ ನಮೂನೆಯ ಅರ್ಜಿಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

**2.3** ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ **ದಿನಾಂಕ 16–12–2009 ರಂದು ಸಂಜೆ 5.30 ಗಂಟೆವರೆಗೆ** ಆಗಿರುತ್ತದೆ.. ಒಂದು ವೇಳೆ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ವಿಶೇಷ ಸೂಚನೆ:–** ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಆಯ್ಕೆ ಪ್ರಕ್ರಿಯೆಗೆ ಪರಿಗಣಿಸಲಾಗುವುದಿಲ್ಲ.

**3.0 ಶುಲ್ಕ (Fee):**

ಯಾವುದೇ ರೀತಿಯ ಶುಲ್ಕವನ್ನು ಅಭ್ಯರ್ಥಿಗಳು ಪಾವತಿಸಬೇಕಾಗಿರುವುದಿಲ್ಲ.

**4.0 ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣ**

| ಸಮತಲ ಮೀಸಲಾತಿ | ಶೀಘ್ರಲಿಪಿಗಾರ (ವೇತನ ಶ್ರೇಣಿ: ರೂ.7275–13350) | | ಬೆರಳಚ್ಚುಗಾರ (ವೇತನ ಶ್ರೇಣಿ: ರೂ.5800–10500) | | ದ್ವಿತೀಯ ದರ್ಜೆ ಸಹಾಯಕ (ವೇತನ ಶ್ರೇಣಿ: ರೂ.5800–10500) | |
|---|---|---|---|---|---|---|
| | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
| ಇತರೆ | – | 1 | 3 | – | 2 | – |
| ಮಹಿಳಾ ಅಭ್ಯರ್ಥಿ | – | – | 1 | 1 | – | 1 |
| ಗ್ರಾಮೀಣ ಅಭ್ಯರ್ಥಿ | – | – | 2 | – | 3 | – |
| ಮಾಜಿ ಸೈನಿಕ | – | – | – | – | 1 | – |
| **ಒಟ್ಟು:** | – | **1** | **6** | **1** | **6** | **1** |

**5.0 ಅರ್ಹತೆ ಮತ್ತು ನಿಬಂಧನೆಗಳು**

**5.1 ವಿದ್ಯಾರ್ಹತೆ:** ಅಧಿಸೂಚನೆಯ ದಿನಾಂಕ 16–11–2009ಕ್ಕೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಅಭ್ಯರ್ಥಿಯು ಹೊಂದಿರಬೇಕು.

| | | |
|---|---|---|
| **5.1.1** | **ಶೀಘ್ರಲಿಪಿಗಾರ ಹುದ್ದೆಗೆ** | (ಅ) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು; ಮತ್ತು<br>(ಆ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಸೀನಿಯರ್ ಬೆರಳಚ್ಚು ಮತ್ತು ಕನ್ನಡ ಸೀನಿಯರ್ ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. |
| **5.1.2** | **ಬೆರಳಚ್ಚುಗಾರ ಹುದ್ದೆಗೆ** | (ಅ) ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು; ಮತ್ತು<br>(ಆ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಸೀನಿಯರ್ ಬೆರಳಚ್ಚು ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. |
| **5.1.3** | **ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ** | ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. |

**6.0 ವಯೋಮಿತಿ:**

ಅಧಿಸೂಚನೆಯ ದಿನಾಂಕ 16–11–2009ಕ್ಕೆ ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಗರಿಷ್ಠ 40 ವರ್ಷ ವಯೋಮಿತಿಯನ್ನು ಮೀರಿರಬಾರದು. ಆದಾಗ್ಯೂ, ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 6(3)(ಸಿ) ಅನ್ವಯ ಮಾಜಿ ಸೈನಿಕರಿಗೆ ಅವರು ಸಶಸ್ತ್ರ ಪಡೆಗಳಲ್ಲಿ ಸೇವೆ ಸಲ್ಲಿಸಿದ ಅವಧಿಗೆ 3 ವರ್ಷ ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳ ವಿನಾಯಿತಿ ಹಾಗೂ 1977ರ ನಿಯಮ 6(3)(ಎಫ್) ಅನ್ವಯ ಅಂಗವಿಕಲರಿಗೆ 10 ವರ್ಷಗಳ ಮತ್ತು 1977ರ ನಿಯಮ 6(3)(ಐ) ಅನ್ವಯ ವಿಧವೆಯರಿಗೆ 10 ವರ್ಷಗಳ ವಯೋಮಿತಿಯಲ್ಲಿ ವಿನಾಯಿತಿ ನೀಡಲಾಗುವುದು.

**7.0 ಸ್ವೀಕೃತ ಅರ್ಜಿಗಳ ಪರಾಮರ್ಶೆ/ಆಯ್ಕೆ ವಿಧಾನ**

ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದವರಿಗೆ ಕಾಯ್ದಿರಿಸಿದ ಹುದ್ದೆಗಳಲ್ಲಿ ಭರ್ತಿಯಾಗದೆ ಖಾಲಿ ಇರುವ ಹುದ್ದೆಗಳಿಗೆ)(ವಿಶೇಷ ನೇಮಕಾತಿ) ನಿಯಮಗಳು, 2001 ಅನ್ವಯ ಸ್ವೀಕರಿಸಲಾದ ಅರ್ಹ ಅರ್ಜಿಗಳನ್ನು ಹುದ್ದೆವಾರು ಕ್ರೋಢೀಕರಿಸಿ, ಅಭ್ಯರ್ಥಿಗಳು ನಿಗದಿತ ನಮೂನೆಯ ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ/ವಿವರಗಳನ್ನು ನಿಯಮಾನುಸಾರ ಪರಿಶೀಲಿಸಿ 1:1 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದಲ್ಲಿ ಪ್ರವರ್ಗವಾರು ಆಯಾ ಹುದ್ದೆಗಳಿಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಗಳಿಸಿದ ಒಟ್ಟು ಶೇಕಡಾವಾರು ಅಂಕಗಳನ್ನು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಅನ್ವಯ ಮಹಿಳಾ ಅಭ್ಯರ್ಥಿ, ಮಾಜಿ ಸೈನಿಕ, ಅಂಗವಿಕಲ ಅಭ್ಯರ್ಥಿಗಳಿಗೆ ನಿಗದಿಪಡಿಸಿದ ಮೀಸಲಾತಿ ಮತ್ತು ಗ್ರಾಮೀಣ ಅಭ್ಯರ್ಥಿಗಳಿಗೆ ಕರ್ನಾಟಕ ನೇಮಕಾತಿಯಲ್ಲಿ ಮೀಸಲಾತಿ (ನಾಗರಿಕ ಸೇವೆಗಳಲ್ಲಿ ರಾಜ್ಯದ ಗ್ರಾಮೀಣ ಅಭ್ಯರ್ಥಿಗಳಿಗಾಗಿ) ಕಾಯಿದೆ, 2000ರ ಅನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿ (Provisional Select List) ಯನ್ನು ಮೆರಿಟ್ ಆಧಾರದಲ್ಲಿ ತಯಾರಿಸಲಾಗುವುದು. ಒಂದು ವೇಳೆ, 29 ರಿಂದ 40 ವರ್ಷ ವಯೋಮಿತಿಯಲ್ಲಿ ಸಾಕಷ್ಟು ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಕೊರತೆ ಆಗುವ ಅಭ್ಯರ್ಥಿಗಳ ಸಂಖ್ಯೆಗೆ ಅನುಗುಣವಾಗಿ 18 ರಿಂದ 28 ವರ್ಷ ವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು ಸಹ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಮೇಲಿನ ಉಪಬಂಧಗಳ ಅನ್ವಯ ಸೇರಿಸಲಾಗುವುದು. ಆದರೆ, ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಯ ನಂತರವೇ ಆಯ್ಕೆ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲಾಗುವುದು.

ಅಂತಿಮವಾಗಿ ಆಯ್ಕೆಯಾದ ಅಭ್ಯರ್ಥಿಗಳನ್ನು ರಾಜ್ಯಾದ್ಯಂತ ಇರುವ ವಿವಿಧ ಅರಣ್ಯ ಕಚೇರಿಗಳಲ್ಲಿ ಕರ್ತವ್ಯ ನಿರ್ವಹಿಸಲು ಸ್ಥಳ ನಿಯುಕ್ತಿಗೊಳಿಸಲಾಗುವುದು.

**ವಿಶೇಷ ಸೂಚನೆಗಳು:–** (i) ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಯ ಹೆಸರನ್ನು ಸೇರಿಸಿದ ಮಾತ್ರಕ್ಕೆ ಅಭ್ಯರ್ಥಿಗೆ ನೇಮಕಾತಿಯ ಹಕ್ಕನ್ನು ನೀಡುವುದಿಲ್ಲ.

(ii) ಶೇಕಡಾವಾರು ಅಂಕಗಳನ್ನು ಲೆಕ್ಕ ಹಾಕುವಾಗ ಪಠ್ಯ ವಿಷಯದಲ್ಲಿನ ಯಾವುದೇ ವಿಷಯದ ಅಂಕಗಳನ್ನು ಹೊರತುಪಡಿಸಲಾಗುವುದಿಲ್ಲ. ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಯು ಗಳಿಸಿರುವ ಎಲ್ಲಾ ವಿಷಯಗಳಲ್ಲಿನ ಒಟ್ಟು ಅಂಕಗಳು ಮತ್ತು ಆಯಾ ಪರೀಕ್ಷಾ ಮಂಡಳಿ ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಪರಿಗಣಿಸಿ ಅಭ್ಯರ್ಥಿಗಳ ಶೇಕಡವಾರು ಅಂಕಗಳನ್ನು ನಿಗದಿಪಡಿಸಲಾಗುವುದು.

**8.0 ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆ**

ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಯ ದಿನಾಂಕವನ್ನು 1:1 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಗೆ ಮಾತ್ರ ಪ್ರತ್ಯೇಕವಾಗಿ ತಿಳಿಸಲಾಗುವುದು. ಮೂಲ ದಾಖಲೆ/ಪ್ರಮಾಣ ಪತ್ರಗಳ ಪರಿಶೀಲನೆಗೆ ಸೂಚನಾ/ತಿಳುವಳಿಕೆ ಪತ್ರ ದೊರೆಯದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿರುವುದಿಲ್ಲವೆಂದು ತಿಳಿಯುವುದು ಮತ್ತು ಈ ವಿಷಯದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ. ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಶಾಲಾ ದಾಖಲಾತಿ ಪ್ರಮಾಣ ಪತ್ರಗಳು) ಶೈಕ್ಷಣಿಕ ಅರ್ಹತೆ, ಮೀಸಲಾತಿ, ಇತ್ಯಾದಿಗಳ ಬಗ್ಗೆ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಸೂಚಿತ ದಿನಾಂಕದಂದು ಆಯ್ಕೆ ಪ್ರಾಧಿಕಾರದ ಎದುರು ಪರಿಶೀಲನೆಗೆ ಕಡ್ಡಾಯವಾಗಿ ಹಾಜರುಪಡಿಸಬೇಕು. ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಹಾಜರುಪಡಿಸಲು ಯಾವುದೇ ಕಾರಣಕ್ಕೂ ಮತ್ತು ಯಾವುದೇ ಸನ್ನಿವೇಶದಲ್ಲಿಯೂ ಕಾಲ ವಿಸ್ತರಣೆ ನೀಡಲಾಗುವುದಿಲ್ಲ. ಒಂದು ವೇಳೆ, ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಗೆ ವ್ಯತಿರಿಕ್ತ ದಾಖಲೆ/ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ದಾಖಲೆ/ಪ್ರಮಾಣ ಪತ್ರಗಳನ್ನು ಪರಿಗಣನೆಗೆ ತೆಗೆದುಕೊಂಡು ಬದಲಾವಣೆ ಮಾಡಲಾಗುವುದಿಲ್ಲ. ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಸೂಚಿತ ದಿನಾಂಕದಂದು ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸದ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಪಡಿಸಲಾಗುವುದು ಹಾಗೂ ಅವರನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.1.** ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಆಯಾ ಹುದ್ದೆಗೆ ನಿಗದಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಆಯಾ ಪರೀಕ್ಷಾ ಮಂಡಳಿ ನಿಗದಿಪಡಿಸಿರುವ ಗರಿಷ್ಠ ಅಂಕಗಳನ್ನು ಹಾಗೂ ಅಭ್ಯರ್ಥಿಯು ಎಲ್ಲಾ ವಿಷಯಗಳಲ್ಲಿ ಗಳಿಸಿರುವ ಒಟ್ಟು ಅಂಕಗಳನ್ನು ಅರ್ಜಿಯಲ್ಲಿ ಸರಿಯಾಗಿ ಮತ್ತು ಸ್ಪಷ್ಟವಾಗಿ ನಮೂದಿಸುವುದು. ಅಸ್ಪಷ್ಟ/ತಪ್ಪು/ಅಪೂರ್ಣ ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಯ ಅರ್ಜಿಯನ್ನು ತಿರಸ್ಕರಿಸಿ ಅಂತಹವರನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**8.2** ಅಭ್ಯರ್ಥಿಯು ಅರ್ಜಿ ನಮೂನೆಯಲ್ಲಿ ಮೀಸಲಾತಿ ಮತ್ತು ಕೋರುವ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಾಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ಸದರಿ ವಿವರಗಳನ್ನು ಅರ್ಜಿಯಲ್ಲಿ ನಮೂದಿಸದಿದ್ದರೆ ಅಂತಹ ಅಭ್ಯರ್ಥಿಯು ಮೀಸಲಾತಿ/ಕೋರುವ ಇತರೆ ಸೌಲಭ್ಯಗಳಿಂದ ವಂಚಿತರಾಗುತ್ತಾರೆ.

**9.0 ಕನ್ನಡ ಭಾಷಾ ಪರೀಕ್ಷೆಯ ಪಠ್ಯಕ್ರಮ**

ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್‌ಸಿಆರ್ 84 ದಿನಾಂಕ 23–9–1985 ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗದಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**9.1** ಕನ್ನಡ ಭಾಷಾ ಪರೀಕ್ಷೆಯನ್ನು ಎರಡು ಹಂತದಲ್ಲಿ ನಡೆಸಲಾಗುತ್ತದೆ. ಇದರ ವಿವರ ಕೆಳಗೆ ನಮೂದಿಸಿದೆ.

ಸಮಯ: 1.00 ಗಂಟೆ

| | | |
|---|---|---|
| ಮೊದಲನೇ ಹಂತ – ಲಿಖಿತ ಪರೀಕ್ಷೆ: | ಲಿಖಿತ ಪರೀಕ್ಷೆಗೆ ಕನ್ನಡ ಶಾಲಾ ನಾಲ್ಕನೇ ತರಗತಿಯ ಕನ್ನಡ ಮುಖ್ಯ ಪಠ್ಯಪುಸ್ತಕ ಹಾಗೂ ವಿವಿಧ ಲೇಖಕರು ಬರೆದ ಕರ್ನಾಟಕ ವಯಸ್ಕರ ಶಿಕ್ಷಣ ಪರಿಷತ್ತು ಪ್ರಕಟಿಸಿರುವ "ಸತ್ಯಕ್ಕೆ ಬೆಲೆ ಕೊಟ್ಟ ಗೆಳೆಯರು" ಎಂಬ ಪಾಠದಿಂದ ಆರಂಭವಾಗುವ ಸಣ್ಣಕಥೆಗಳು ಇವುಗಳಿಂದ ಪ್ರಶ್ನೆಗಳನ್ನು ಕೊಡಲಾಗುವುದು. | 90 ಅಂಕಗಳು |
| ಎರಡನೇ ಹಂತ – ಮೌಖಿಕ ಪರೀಕ್ಷೆ: | ಅ) ಮುದ್ರಿತ ಹಾಗೂ ಹಸ್ತ ಪ್ರತಿಗಳನ್ನು ಓದುವುದು.<br>ಆ) ಅರ್ಜಿಗಳನ್ನು ಓದಿ ವಿವರಿಸುವುದು.<br>ಇ) ಸಂಭಾಷಣೆ ನಡೆಸುವುದು. | 10 ಅಂಕಗಳು |

**9.2** ಈ ಕೆಳಗಿನ ಮಟ್ಟದಲ್ಲಿ ಮೂರು ವಿಧದಲ್ಲಿ ಕನಿಷ್ಠ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವವರೆಂದು ಪರಿಗಣಿಸಲಾಗುವುದು.

| | | |
|---|---|---|
| (ಅ) | ಲಿಖಿತ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: | 30 |
| (ಆ) | ಮೌಖಿಕ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: | 3 |
| (ಇ) | ಲಿಖಿತ ಪರೀಕ್ಷೆಯಲ್ಲಿ ಮತ್ತು ಮೌಖಿಕ ಪರೀಕ್ಷೆಯಲ್ಲಿ ಒಟ್ಟಿಗೆ ಪಡೆಯತಕ್ಕ ಕನಿಷ್ಠ ಅಂಕಗಳು: | 35 |

**10.0 ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ಮೂಲ ದಾಖಲೆ/ಪ್ರಮಾಣ ಪತ್ರಗಳ ವಿವರ ಕೆಳಕಂಡಂತಿದೆ.**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಇತ್ಯಾದಿ ಮೀಸಲಾತಿ ಕುರಿತು ಮೂಲ ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು ಮತ್ತು ಸೂಚಿತ ದಿನಾಂಕದಂದು ಸದರಿ ಮೂಲ ದಾಖಲೆ/ಪ್ರಮಾಣ ಪತ್ರಗಳನ್ನು ಆಯ್ಕೆ ಪ್ರಾಧಿಕಾರದ ಎದುರು ಪರಿಶೀಲನೆಗೆ ತಪ್ಪದೆ ಹಾಜರುಪಡಿಸತಕ್ಕದ್ದು.

| | |
|---|---|
| **10.1** | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ" ರಲ್ಲಿ ಪಡೆದಿರಬೇಕು. |
| **10.2** | ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು. |
| **10.3** | ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರಿಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲುರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.<br>**ವಿಶೇಷ ಸೂಚನೆ:–** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ. |
| **10.4** | ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡಿರಬೇಕು ಹಾಗೂ ಮೂಲ ದಾಖಲೆಗಳ ಪರೀಶೀಲನೆಯ ವೇಳೆ ಅವುಗಳನ್ನು ಹಾಜರುಪಡಿಸತಕ್ಕದ್ದು. |
| **10.5** | ವಿಧವೆಯರು ಈ ಕೆಳಕಂಡ ಮೂಲ ದಾಖಲಾತಿಗಳನ್ನು ಪರಿಶೀಲನೆಯ ವೇಳೆ ಹಾಜರುಪಡಿಸತಕ್ಕದ್ದು. |
| | (ಅ) ಸಕ್ಷಮ ಪ್ರಾಧಿಕಾರದಿಂದ ಪಡೆದ ಪತಿಯ ಮರಣದ ಸಮರ್ಥನೆ ಪತ್ರ |
| | (ಆ) ಸಕ್ಷಮ ಪ್ರಾಧಿಕಾರದಿಂದ ಪಡೆದ ಜೀವಿತ ಸದಸ್ಯರ ದೃಢೀಕರಣ ಪತ್ರ |
| | (ಇ) ಪುನರ್ ವಿವಾಹ ಮಾಡಿಕೊಂಡಿಲ್ಲವೆಂಬ ಬಗ್ಗೆ ಜ್ಯುಡಿಶಿಯಲ್ ಮೊದಲನೆ ದರ್ಜೆ ನ್ಯಾಯಾಧೀಶರ ಮುಂದೆ ಪ್ರಮಾಣೀಕರಿಸಿದ ಪ್ರಮಾಣ ಪತ್ರ. |
| **10.6** | ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ 8–11–2002 ರಲ್ಲಿ ಗುರುತಿಸಲ್ಪಟ್ಟಿರುವ ಹುದ್ದೆಗೆ ನಿಗದಿಪಡಿಸಿರುವ ಅಂಗವಿಕಲತೆ ಹೊಂದಿರುವ ಅಭ್ಯರ್ಥಿಗಳಿಗೆ ಮಾತ್ರ ವಯೋಮಿತಿಯಲ್ಲಿ ಸಡಿಲಿಕೆ ಇರುತ್ತದೆ. ಈ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರಬೇಕು. |
| **10.7** | ಅವಶ್ಯವೆಂದು ಭಾವಿಸುವ ಇನ್ನಿತರ ಮೂಲ ದಾಖಲೆ/ಪ್ರಮಾಣ ಪತ್ರಗಳು. |

**11.0 ಗಮನಿಸಬೇಕಾದ ಬಹು ಮುಖ್ಯ ಅಂಶಗಳು**

| | |
|---|---|
| **11.1** | ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಚಿಸಿದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸತಕ್ಕದ್ದು. |
| **11.2** | ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. |
| **11.3** | ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳತಕ್ಕದ್ದು. |
| **11.4** | ಅಭ್ಯರ್ಥಿಗಳು ನಿಗದಿತ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ/ವಿವರಗಳ ಆಧಾರದ ಮೇಲೆ ಅವರ ಅರ್ಹತೆಯನ್ನು ಪರಿಗಣಿಸಿ 1:1 (ಖಾಲಿ ಹುದ್ದೆ : ಅಭ್ಯರ್ಥಿ) ಅನುಪಾತದ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಸಿದ್ಧಪಡಿಸುವುದರಿಂದ |

| | |
|---|---|
| | ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಗಳೇ ಅದಕ್ಕೆ ನೇರ ಮತ್ತು ಸಂಪೂರ್ಣ ಜವಾಬ್ದಾರರಾಗುತ್ತಾರೆ. ಅಭ್ಯರ್ಥಿಗಳು ನಿಗದಿತ ಅರ್ಜಿಯಲ್ಲಿ ನೀಡಿರುವ ಮಾಹಿತಿ/ವಿವರಗಳನ್ನು ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ. ಆದ ಪ್ರಯುಕ್ತ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಈ ಕಚೇರಿಯ ಅಧಿಸೂಚನೆ ದಿನಾಂಕ:16–11–2009 ರಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು. |
| **11.5** | ಪ್ರವರ್ಗದ ಮೀಸಲಾತಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಸಂಬಂಧಿಸಿದ ಪ್ರವರ್ಗದ ಕಾಲಂ ಅನ್ನು ಕಡ್ಡಾಯವಾಗಿ ನಮೂದಿಸಬೇಕು. ಈ ಕಾಲಂ ಅನ್ನು ಭರ್ತಿ ಮಾಡದೆ ಖಾಲಿ ಬಿಟ್ಟಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು. ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶವಿಲ್ಲ. |
| **11.6** | ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ, ಅಭ್ಯರ್ಥಿ ಸಹಿ ಇಲ್ಲದ ಮತ್ತು ಅಭ್ಯರ್ಥಿಯ ಭಾವಚಿತ್ರ ಅಂಟಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ತತ್ಸಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ. |
| **11.7** | ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕ ಹಾಗೂ ಸಮಯದ ನಂತರ ಸ್ವೀಕೃತವಾದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಅಥವಾ ಸ್ವೀಕೃತವಾಗದೇ ಇರುವುದಕ್ಕೆ ಆಯ್ಕೆ ಪ್ರಾಧಿಕಾರವು ಜವಾಬ್ದಾರಿಯಲ್ಲ. |
| **11.8** | ಒಬ್ಬನೇ ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ತಾನು ಸಲ್ಲಿಸಿರುವ ಎಲ್ಲಾ ಅರ್ಜಿಗಳಲ್ಲಿಯೂ ಒಂದೇ ರೀತಿ ಮಾಹಿತಿಯನ್ನು ನೀಡಿದಲ್ಲಿ ಅಭ್ಯರ್ಥಿ ಸಲ್ಲಿಸಿರುವ ಯಾವುದಾದರೂ ಒಂದು ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು. ಈ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ. |
| **11.9** | ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯು ಸಲ್ಲಿಸಿದ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು. |
| **11.10** | ಅಭ್ಯರ್ಥಿಯು ಶೀಘ್ರಲಿಪಿಗಾರ, ದ್ವಿತೀಯ ದರ್ಜೆ ಸಹಾಯಕ ಹಾಗೂ ಬೆರಳಚ್ಚುಗಾರ ಈ ಮೂರೂ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸಿ, ಈ ಮೂರೂ ಹುದ್ದೆಗಳ ಅರ್ಜಿಗಳಲ್ಲಿ ಭಿನ್ನ ಭಿನ್ನವಾದ ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯು ಸಲ್ಲಿಸಿರುವ ಮೂರೂ ಅರ್ಜಿಗಳನ್ನು ತಿರಸ್ಕರಿಸಲಾಗುವುದು. |
| **11.11** | ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು. |
| **11.12** | ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ. |
| **11.13** | ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ. |
| **11.14** | ಅಭ್ಯರ್ಥಿಯು ಸಮಾಜಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ. |
| **11.15** | ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳಾ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ. |
| **11.16** | ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳು ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ. |
| **11.17** | ಅಭ್ಯರ್ಥಿಯು ತಪ್ಪು ಮಾಹಿತಿಗಳನ್ನು ಅರ್ಜಿಯಲ್ಲಿ ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು. |

| | |
|---|---|
| **11.18** | ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005 ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ. |
| **11.19** | ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ನಿರ್ದೇಶನಗಳು, ಇಲಾಖೆ ಸುತ್ತೋಲೆಗಳು ಬಂದಲ್ಲಿ, ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ. |
| **11.20** | ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: **www.karnatakaforest.gov.in** ನಲ್ಲಿ ಪ್ರಕಟಿಸಲಾಗುವುದು. |

ಬೆಂಗಳೂರು,
ದಿನಾಂಕ: 16–11–2009.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
ಮತ್ತು ಆಯ್ಕೆ ಪ್ರಾಧಿಕಾರ.

## ಕರ್ನಾಟಕ ಅರಣ್ಯ ಇಲಾಖೆ

## ದ್ವಿತೀಯ ದರ್ಜೆ ಸಹಾಯಕರ (ಬ್ಯಾಕ್‌ಲಾಗ್) ಹುದ್ದೆಗೆ ಅರ್ಜಿ

ಅಧಿಸೂಚನೆ ಸಂಖ್ಯೆ: ಬಿ9–ಬ್ಯಾಕ್‌ಲಾಗ್–ನೇಮಕಾತಿ–ವಿವ–3/2009–10 ದಿನಾಂಕ 16–11–2009

**ಅಧಿಸೂಚನೆ ದಿನಾಂಕ 16–11–2009ರ ನಂತರ ತೆಗೆಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ.**

**ಅರ್ಜಿಯನ್ನು ಭರ್ತಿ ಮಾಡಲು ಸೂಚನೆಗಳು:**

i) ಕನ್ನಡ ಭಾಷೆಯ ದಪ್ಪ ಅಥವಾ ಆಂಗ್ಲ ಭಾಷೆಯ Capital ಅಕ್ಷರಗಳಲ್ಲಿ ಭರ್ತಿ ಮಾಡಬೇಕು
ii) ಅಪೂರ್ಣ/ತಪ್ಪು/ಅಸ್ಪಷ್ಟ/ಸುಳ್ಳು ಮಾಹಿತಿ ಭರ್ತಿ ಮಾಡಬಾರದು.
iii) ಅರ್ಜಿಯನ್ನು ಸ್ಪಷ್ಟವಾಗಿ ಭರ್ತಿ ಮಾಡಬೇಕು

1 ಅಭ್ಯರ್ಥಿಯ ಹೆಸರು

2 ತಂದೆಯ / ಗಂಡನ / ಪೋಷಕರ ಹೆಸರು

3 ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ (ಅಭ್ಯರ್ಥಿಯ ಹೆಸರು ಹೊರತುಪಡಿಸಿ)

ಪಿನ್ ಕೋಡ್

4 ಅಭ್ಯರ್ಥಿಯ ಸ್ಥಿರ/ಮೊಬೈಲ್ ದೂರವಾಣಿ ಸಂಖ್ಯೆ

5 ಜನ್ಮ ದಿನಾಂಕ — ದಿನ - ತಿಂಗಳು - ವರ್ಷ

6 ಲಿಂಗ (ಸೂಕ್ತ ಅಂಕಣವನ್ನು √ ಮಾಡಿ) — ಪುರುಷ / ಸ್ತ್ರೀ

7 ವಿದ್ಯಾರ್ಹತೆ (ಸೂಕ್ತ ಅಂಕಣವನ್ನು √ ಮಾಡಿ) — ಎಸ್‌ಎಸ್‌ಎಲ್‌ಸಿ / ತತ್ಸಮಾನ ಪರೀಕ್ಷೆ

8 ಅಂಕಗಳು: ಎಸ್‌ಎಸ್‌ಎಲ್‌ಸಿ/ತತ್ಸಮಾನ ಪರೀಕ್ಷೆ — ನಿಗದಿಪಡಿಸಿದ ಗರಿಷ್ಠ ಅಂಕಗಳು / ಗಳಿಸಿದ ಒಟ್ಟು ಅಂಕಗಳು

9 ಮೀಸಲಾತಿ ಪ್ರವರ್ಗ (ಸೂಕ್ತ ಅಂಕಣವನ್ನು √ ಮಾಡಿ) — ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ

10 ಸಮತಲ ಮೀಸಲಾತಿ (ಸೂಕ್ತ ಅಂಕಣವನ್ನು √ ಮಾಡಿ) — ಮಹಿಳೆ / ಮಾಜಿ ಸೈನಿಕ / ಅಂಗವಿಕಲ / ಗ್ರಾಮೀಣ / ಇತರೆ

11 ಅಭ್ಯರ್ಥಿಯು ಮಾಜಿ ಸೈನಿಕರಾದಲ್ಲಿ ಮಾತ್ರ ಸಶಸ್ತ್ರ ಪಡೆಗಳಲ್ಲಿ ಸಲ್ಲಿಸಿದ ಸೇವಾವಧಿ — ವರ್ಷ - ತಿಂಗಳು - ದಿನ

12 ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ ಮಾತ್ರ ಈ ಅಂಕಣವನ್ನು √ ಮಾಡಿ

**ಘೋಷಣಾ ಪತ್ರ**

ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳು ನನ್ನ ತಿಳುವಳಿಕೆ ಮಟ್ಟಿಗೆ ಸತ್ಯ ಹಾಗೂ ಪರಿಪೂರ್ಣವೆಂದು ನಂಬಿರುತ್ತೇನೆ. ಯಾವುದಾದರೂ ತಪ್ಪು/ಸುಳ್ಳು ಮಾಹಿತಿ ನೀಡಿರುವುದು ಕಂಡು ಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸುವ, ಒಂದು ವೇಳೆ ಬ್ಯಾಕ್‌ಲಾಗ್ ಹುದ್ದೆಗೆ ನೇಮಕಾತಿಯಾದಲ್ಲಿ ನನ್ನನ್ನು ಸೇವೆಯಿಂದ ಯಾವುದೇ ಮುನ್ಸೂಚನೆ ಇಲ್ಲದೆ ವಜಾ ಮಾಡುವ ಹಾಗೂ ನನ್ನ ವಿರುದ್ಧ ತತ್ಸಬಂಧ ಕ್ರಿಮಿನಲ್ ಕ್ರಮ ಕೈಗೊಳ್ಳಲು ಇಲಾಖೆಗೆ ಅಧಿಕಾರವಿದೆಯೆಂದು ತಿಳಿದಿದ್ದೇನೆ. ಅಲ್ಲದೆ, ನಾನು ಈವರೆಗೆ ಯಾವುದೇ ಕಾನೂನು/ಕ್ರಿಮಿನಲ್ ಮೊಕದ್ದಮೆಗಳನ್ವಯ ಶಿಕ್ಷೆಗೆ ಒಳಪಟ್ಟಿಲ್ಲವೆಂದು ಸಹ ದೃಢೀಕರಿಸುತ್ತೇನೆ.

ಸ್ಥಳ:

ದಿನಾಂಕ: **ಅಭ್ಯರ್ಥಿಯ ಸಹಿ**

## ಕರ್ನಾಟಕ ಅರಣ್ಯ ಇಲಾಖೆ

## ಬೆರಳಚ್ಚುಗಾರರ (ಬ್ಯಾಕ್‌ಲಾಗ್) ಹುದ್ದೆಗೆ ಅರ್ಜಿ

ಅಧಿಸೂಚನೆ ಸಂಖ್ಯೆ: ಬಿ9–ಬ್ಯಾಕ್‌ಲಾಗ್–ನೇಮಕಾತಿ–ವಿವ–3/2009–10 ದಿನಾಂಕ 16–11–2009

**ಅಧಿಸೂಚನೆ ದಿನಾಂಕ 16–11–2009ರ ನಂತರ ತೆಗೆಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ.**

**ಅರ್ಜಿಯನ್ನು ಭರ್ತಿ ಮಾಡಲು ಸೂಚನೆಗಳು:**

i) ಕನ್ನಡ ಭಾಷೆಯ ದಪ್ಪ ಅಥವಾ ಆಂಗ್ಲ ಭಾಷೆಯ Capital ಅಕ್ಷರಗಳಲ್ಲಿ ಭರ್ತಿ ಮಾಡಬೇಕು

ii) ಅಪೂರ್ಣ/ತಪ್ಪು/ಅಸ್ಪಷ್ಟ/ಸುಳ್ಳು ಮಾಹಿತಿ ಭರ್ತಿ ಮಾಡಬಾರದು.

iii) ಅರ್ಜಿಯನ್ನು ಸ್ಪಷ್ಟವಾಗಿ ಭರ್ತಿ ಮಾಡಬೇಕು

1 ಅಭ್ಯರ್ಥಿಯ ಹೆಸರು

2 ತಂದೆಯ / ಗಂಡನ / ಪೋಷಕರ ಹೆಸರು

3 ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ (ಅಭ್ಯರ್ಥಿಯ ಹೆಸರು ಹೊರತುಪಡಿಸಿ)

ಪಿನ್ ಕೋಡ್

4 ಅಭ್ಯರ್ಥಿಯ ಸ್ಥಿರ/ಮೊಬೈಲ್ ದೂರವಾಣಿ ಸಂಖ್ಯೆ

5 ಜನ್ಮ ದಿನಾಂಕ — ದಿನ - ತಿಂಗಳು - ವರ್ಷ

6 ಲಿಂಗ (ಸೂಕ್ತ ಅಂಕಣವನ್ನು √ ಮಾಡಿ) — ಪುರುಷ / ಸ್ತ್ರೀ

7 ವಿದ್ಯಾರ್ಹತೆ (ಸೂಕ್ತ ಅಂಕಣವನ್ನು √ ಮಾಡಿ) — ಎಸ್‌ಎಸ್‌ಎಲ್‌ಸಿ / ತತ್ಸಮಾನ ಪರೀಕ್ಷೆ

8 ಇತರೆ ವಿದ್ಯಾರ್ಹತೆ — ಕನ್ನಡ ಸೀನಿಯರ್ ಬೆರಳಚ್ಚು / ತತ್ಸಮಾನ ಪರೀಕ್ಷೆ

9 ಅಂಕಗಳು — ನಿಗದಿಪಡಿಸಿದ ಗರಿಷ್ಠ ಅಂಕಗಳು / ಗಳಿಸಿದ ಒಟ್ಟು ಅಂಕಗಳು

i) ಎಸ್‌ಎಸ್‌ಎಲ್‌ಸಿ/ತತ್ಸಮಾನ ಪರೀಕ್ಷೆ

ii) ಕನ್ನಡ ಸೀನಿಯರ್ ಬೆರಳಚ್ಚು / ತತ್ಸಮಾನ ಪರೀಕ್ಷೆ

10 ಮೀಸಲಾತಿ ಪ್ರವರ್ಗ (ಸೂಕ್ತ ಅಂಕಣವನ್ನು √ ಮಾಡಿ) — ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ

11 ಸಮತಲ ಮೀಸಲಾತಿ (ಸೂಕ್ತ ಅಂಕಣವನ್ನು √ ಮಾಡಿ) — ಮಹಿಳೆ / ಮಾಜಿ ಸೈನಿಕ / ಗ್ರಾಮೀಣ / ಇತರೆ

12 ಅಭ್ಯರ್ಥಿಯು ಮಾಜಿ ಸೈನಿಕರಾದಲ್ಲಿ ಮಾತ್ರ ಸಶಸ್ತ್ರ ಪಡೆಗಳಲ್ಲಿ ಸಲ್ಲಿಸಿದ ಸೇವಾವಧಿ — ವರ್ಷ - ತಿಂಗಳು - ದಿನ

13 ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ ಮಾತ್ರ ಈ ಅಂಕಣವನ್ನು √ ಮಾಡಿ

**ಘೋಷಣಾ ಪತ್ರ**

ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳು ನನ್ನ ತಿಳುವಳಿಕೆ ಮಟ್ಟಿಗೆ ಸತ್ಯ ಹಾಗೂ ಪರಿಪೂರ್ಣವೆಂದು ನಂಬಿರುತ್ತೇನೆ. ಯಾವುದಾದರೂ ತಪ್ಪು/ಸುಳ್ಳು ಮಾಹಿತಿ ನೀಡಿರುವುದು ಕಂಡು ಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸುವ, ಒಂದು ವೇಳೆ ಬ್ಯಾಕ್‌ಲಾಗ್ ಹುದ್ದೆಗೆ ನೇಮಕಾತಿಯಾದಲ್ಲಿ ನನ್ನನ್ನು ಸೇವೆಯಿಂದ ಯಾವುದೇ ಮುನ್ಸೂಚನೆ ಇಲ್ಲದೆ ವಜಾ ಮಾಡುವ ಹಾಗೂ ನನ್ನ ವಿರುದ್ಧ ತತ್ಸಬಂಧ ಕ್ರಿಮಿನಲ್ ಕ್ರಮ ಕೈಗೊಳ್ಳಲು ಇಲಾಖೆಗೆ ಅಧಿಕಾರವಿದೆಯೆಂದು ತಿಳಿದಿದ್ದೇನೆ. ಅಲ್ಲದೆ, ನಾನು ಈವರೆಗೆ ಯಾವುದೇ ಕಾನೂನು/ಕ್ರಿಮಿನಲ್ ಮೊಕದ್ದಮೆಗಳನ್ವಯ ಶಿಕ್ಷೆಗೆ ಒಳಪಟ್ಟಿಲ್ಲವೆಂದು ಸಹ ದೃಢೀಕರಿಸುತ್ತೇನೆ.

ಸ್ಥಳ:

ದಿನಾಂಕ: **ಅಭ್ಯರ್ಥಿಯ ಸಹಿ**

## ಕರ್ನಾಟಕ ಅರಣ್ಯ ಇಲಾಖೆ

## ಶೀಘ್ರಲಿಪಿಗಾರ (ಬ್ಯಾಕ್‌ಲಾಗ್) ಹುದ್ದೆಗೆ ಅರ್ಜಿ (ಪರಿಶಿಷ್ಟ ಪಂಗಡದವರಿಗೆ ಮಾತ್ರ)

ಅಧಿಸೂಚನೆ ಸಂಖ್ಯೆ: ಬಿ9–ಬ್ಯಾಕ್‌ಲಾಗ್–ನೇಮಕಾತಿ–ವಿವ–3/2009–10 ದಿನಾಂಕ 16–11–2009

**ಅಧಿಸೂಚನೆ ದಿನಾಂಕ 16–11–2009ರ ನಂತರ ತೆಗೆಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ.**

**ಅರ್ಜಿಯನ್ನು ಭರ್ತಿ ಮಾಡಲು ಸೂಚನೆಗಳು:**

i) ಕನ್ನಡ ಭಾಷೆಯ ದಪ್ಪ ಅಥವಾ ಆಂಗ್ಲ ಭಾಷೆಯ Capital ಅಕ್ಷರಗಳಲ್ಲಿ ಭರ್ತಿ ಮಾಡಬೇಕು

ii) ಅಪೂರ್ಣ/ತಪ್ಪು/ಅಸ್ಪಷ್ಟ/ಸುಳ್ಳು ಮಾಹಿತಿ ಭರ್ತಿ ಮಾಡಬಾರದು.

iii) ಅರ್ಜಿಯನ್ನು ಸ್ಪಷ್ಟವಾಗಿ ಭರ್ತಿ ಮಾಡಬೇಕು

1 ಅಭ್ಯರ್ಥಿಯ ಹೆಸರು

2 ತಂದೆಯ / ಗಂಡನ / ಪೋಷಕರ ಹೆಸರು

3 ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ (ಅಭ್ಯರ್ಥಿಯ ಹೆಸರು ಹೊರತುಪಡಿಸಿ)

ಪಿನ್ ಕೋಡ್

4 ಅಭ್ಯರ್ಥಿಯ ಸ್ಥಿರ/ಮೊಬೈಲ್ ದೂರವಾಣಿ ಸಂಖ್ಯೆ

5 ಜನ್ಮ ದಿನಾಂಕ — ದಿನ - ತಿಂಗಳು - ವರ್ಷ

6 ಲಿಂಗ (ಸೂಕ್ತ ಅಂಕಣವನ್ನು √ ಮಾಡಿ) — ಪುರುಷ / ಸ್ತ್ರೀ

7 ವಿದ್ಯಾರ್ಹತೆ (ಸೂಕ್ತ ಅಂಕಣವನ್ನು √ ಮಾಡಿ) — ಎಸ್‌ಎಸ್‌ಎಲ್‌ಸಿ / ತತ್ಸಮಾನ ಪರೀಕ್ಷೆ

8 ಇತರೆ ವಿದ್ಯಾರ್ಹತೆ (ಸೂಕ್ತ ಅಂಕಣವನ್ನು √ ಮಾಡಿ) — ಕನ್ನಡ ಸೀನಿಯರ್ ಬೆರಳಚ್ಚು / ತತ್ಸಮಾನ ಪರೀಕ್ಷೆ; ಕನ್ನಡ ಸೀನಿಯರ್ ಶೀಘ್ರಲಿಪಿ / ತತ್ಸಮಾನ ಪರೀಕ್ಷೆ

9 ಅಂಕಗಳು

| ಅಂಕಗಳು | ನಿಗದಿಪಡಿಸಿದ ಗರಿಷ್ಠ ಅಂಕಗಳು | ಗಳಿಸಿದ ಒಟ್ಟು ಅಂಕಗಳು |
|---|---|---|
| i) ಎಸ್‌ಎಸ್‌ಎಲ್‌ಸಿ/ತತ್ಸಮಾನ ಪರೀಕ್ಷೆ | | |
| ii) ಕನ್ನಡ ಸೀನಿಯರ್ ಬೆರಳಚ್ಚು /ತತ್ಸಮಾನ ಪರೀಕ್ಷೆ | | |
| iii) ಕನ್ನಡ ಸೀನಿಯರ್ ಶೀಘ್ರಲಿಪಿ/ತತ್ಸಮಾನ ಪರೀಕ್ಷೆ | | |

10 ಮೀಸಲಾತಿ ಪ್ರವರ್ಗ (ಅಂಕಣವನ್ನು √ ಮಾಡಿ) — ಪರಿಶಿಷ್ಟ ಪಂಗಡ

11 ಸಮತಲ ಮೀಸಲಾತಿ (ಸೂಕ್ತ ಅಂಕಣವನ್ನು √ ಮಾಡಿ) — ಮಾಜಿ ಸೈನಿಕ / ಇತರೆ

12 ಅಭ್ಯರ್ಥಿಯು ಮಾಜಿ ಸೈನಿಕರಾದಲ್ಲಿ ಮಾತ್ರ ಸಶಸ್ತ್ರ ಪಡೆಗಳಲ್ಲಿ ಸಲ್ಲಿಸಿದ ಸೇವಾವಧಿ — ವರ್ಷ - ತಿಂಗಳು - ದಿನ

13 ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ ಮಾತ್ರ ಈ ಅಂಕಣವನ್ನು √ ಮಾಡಿ

**ಘೋಷಣಾ ಪತ್ರ**

ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿ/ವಿವರಗಳು ನನ್ನ ತಿಳುವಳಿಕೆ ಮಟ್ಟಿಗೆ ಸತ್ಯ ಹಾಗೂ ಪರಿಪೂರ್ಣವೆಂದು ನಂಬಿರುತ್ತೇನೆ. ಯಾವುದಾದರೂ ತಪ್ಪು/ಸುಳ್ಳು ಮಾಹಿತಿ ನೀಡಿರುವುದು ಕಂಡು ಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸುವ, ಒಂದು ವೇಳೆ ಬ್ಯಾಕ್‌ಲಾಗ್ ಹುದ್ದೆಗೆ ನೇಮಕಾತಿಯಾದಲ್ಲಿ ನನ್ನನ್ನು ಸೇವೆಯಿಂದ ಯಾವುದೇ ಮುನ್ಸೂಚನೆ ಇಲ್ಲದೆ ವಜಾ ಮಾಡುವ ಹಾಗೂ ನನ್ನ ವಿರುದ್ಧ ತತ್ಸಬಂಧ ಕ್ರಿಮಿನಲ್ ಕ್ರಮ ಕೈಗೊಳ್ಳಲು ಇಲಾಖೆಗೆ ಅಧಿಕಾರವಿದೆಯೆಂದು ತಿಳಿದಿದ್ದೇನೆ. ಅಲ್ಲದೆ, ನಾನು ಈವರೆಗೆ ಯಾವುದೇ ಕಾನೂನು/ಕ್ರಿಮಿನಲ್ ಮೊಕದ್ದಮೆಗಳನ್ವಯ ಶಿಕ್ಷೆಗೆ ಒಳಪಟ್ಟಿಲ್ಲವೆಂದು ಸಹ ದೃಢೀಕರಿಸುತ್ತೇನೆ.

ಸ್ಥಳ:

ದಿನಾಂಕ: **ಅಭ್ಯರ್ಥಿಯ ಸಹಿ**

ಪಿ.ಆರ್. 977

**IN THE COURT OF THE IV ADDL.CITY CIVIL JUDGE**
**MAYOHALL, BANGALORE, CCH-21**
**P & S.C.NO.25039/2009 HG: 27/11/2009**

**PETITIONER**

1. Dilshad Begum W/o Late Syed Ameer Jan @ S.A. Sultan 56 yrs
2. Syed Saleem Pasha S/o Late Syed Ameer Jan @ S.A.Sultan 40 yrs
3. Syed Zameer Pasha S/o Late Syed Ameer Jan @ S.A.Sultan 35 yrs
4. Syed Habeeb Pasha S/o Late Syed Ameer Jan @ S.A.Sultan 34 yrs
   1 to 4 R/at # 4, Old No.2 Balaji Layout Davis Road St.Thomas Town Post, Bangalore-84.
5. Yasmeen Khan W/o Dr.Zeeshan Khan D/o Late Syed Ameer Jan @ S.A.Sultan, 37 yrs
   R/t # 3, Jermaiah Road, Frazer Town, Bangalore-5

**V/s**

**RESPONDENT**

Nil

**PUBLIC NOTICE**

Notice is hereby given that a petition has been made to this Court under Sec 372, of the Indian Succession Act, for grant of Succession Certificate in respect of amount, shares, dividends lying in the name of syed Ameer Jan @ S.A.Sultan., who died on 17/05/2009 at Bangalore.

Be it known that No caveat has been entered and the said petition is posted for hearing on 27/11/2009 at 11'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

1. HSBC, with Customer Number 071-560858
2. Canara Bank, Hoskote Branch, A/c No.497
3. Town co-operative Bank Ltd., Hoskote Branch, A/c No.1982.

Given under my hand and the seal of the Court, this the 30th day of October 2009

By Order of the Court
Assistant Registrar,
City Civil Court, Mayo Hall Unit, Bangalore.

P.D. 128

**IN THE COURT OF THE IV ADDL.CITY CIVIL JUDGE**
**MAYOHALL, BANGALORE, CCH-21**
**P & S.C.NO.25031/2009 HG: 21/11/2009**

**PETITIONER**

1. Sri Anthony I.Brito S/o of late Sri H.H.Brito Businessman, 55 years R/at at 4 Langford Road, Bangalore-25
2. Smt Genevieve T.Mascarenhas W/o Sri Hugh Mascarenhas, House wife, aged 54 yrs, c/o Dr. Vinay Prabhu, Dept of Radiology M.S.Ramaiah Memorial Hospital, New B.E.L. Road, Bangalore-560054

**V/s**

**RESPONDENT**

1. Sri High G.Brito S/o late Sri H.H. Brito 57 yrs
2. Ralph S.Brito S/o late H.H. Brito 45 yrs Both R/at 4 Langford Road, Bangalore-25

**PUBLIC NOTICE**

Notice is hereby given that a petition has been made to this Court under Sec 270&278 of the Indian Succession Act, for grant of Letter of Administration in respect of the property of the deceased late Sri H.H.Brito, Who died on 25/6/86 at Nashik East.

Be it known that No caveat has been entered and the said petition is posted for hearing on 21/11/2009 at 11'O clock. Any person's claiming to have any interest may come and participate in the proceedings before grant of Letter of Administration to the petitioners.

**SCHEDULE**

All that piece and parcel of residential premises bearing No.4 previously No.19 Langford Road, Shanthinagar, Bangalore-25 and bounded on the East by 3/2 Langford Road West by: Oleff Road North by:Langford Road South by: 21, Moyenville Road and measuring 95 feet and North 90 feet on the south 91 feet on the east and 116 feet west together with the compound walls on the North south and west along with all the building standing thereon the total area is 9800 sq

Property situated at Jeppinamogaru A Village and Attavar ward Mangalore, D.K.

| R.S No. | T.S.No | EXTENT A-C | NAME OF THE MULGENT TENANT |
|---|---|---|---|
| 73-15 | 840-2 | 0-28 | Panduranga Pai |
| 73-13 | 840-3 | 0-23 | Panduranga Pai |
| 73-02 | 840-9 | 0-09 | A.Thaniappa |
| 72-25B | - | 0-15 | Isabella Lobo |
| 840-8&9 | | | Carine Lobo |

Given under my hand and the seal of the Court, this the 30th day of October 2009

By Order of the Court

P.D. 129 Assistant Registrar,

City Civil Court Mayo Hall Unit, Bangalore.

**IN THE COURT OF THE IV ADDL.CITY CIVIL JUDGE**
**MAYOHALL, BANGALORE, CCH-21**
**P & S.C.NO.25035/2009 HG: 21/11/2009**

**PETITIONER**

1. Smt Devi Hari Kumar 26 yrs W/o late Sri S.Hari Kumar
2. Harshita age 1 year D/o late S.Hari Kumar since minor represented by her mother natural guardian Smt Devi Hari Kumar Both R/at No.36, 8th Main, 9th Cross, Hoysala Nagar, T.C.Palya R.M.Nagar Post, Bangalore.

**V/s**

**RESPONDENT**

NIL

**PUBLIC NOTICE**

Notice is hereby given that a petition has been made to this Court under Sec 372 of the Indian Succession Act, for grant of Succession Certificate in respect of the assets of the deceased late Sri S. Hari Kumar, Who died on 26/4/09 at Bangalore.

Be it known that No caveat has been entered and the said petition is posted for hearing on 21/11/2009 at 11'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

Life Insurance of Rs.5,00,000/- Covered by the TATA AIG

Given under my hand and the seal of the Court, this the 30th day of October 2009

By Order of the Court

P.D. 130 Assistant Registrar,

City Civil Court, Mayo Hall Unit, Bangalore.

**IN THE COURT OF THE IV ADDL.CITY CIVIL JUDGE**
**MAYOHALL, BANGALORE, CCH-21**
**P & S.C.NO.25037/2009 HG: 30/11/2009**

**PETITIONER**

1) S. Vijaya Rangan 61 yrs 2) S.Mani 56 yrs 3) S.Sukumaran 51 yrs 4) Shantha 54 yrs 5) Vijayalakshmi 6) S.Selvarani 37 yrs All S/o & D/o Late Swaminathan @ Saminathan Smt Late Pattammal 7) Sheela D/o late S.Shekhar Grand daughter of late Pattammal 31 yrs 8) Sumathi Kumar D/o late S.Shekhar Grand daughter of late pattammal 28 yrs 9) S.Raja Shekar S/o late S.Shekhar Grand son of late pattammal 26 yrs 10) Iresh Shekhar W/o late S.Shekhar 51 yrs All are presently residing at No.15/A, Chandrappa Lane, Jeevana Halli, Cox town, Bangalore-5.

**V/s**

**RESPONDENT**

Nil

**PUBLIC NOTICE**

Notice is hereby given that a petition has been made to this Court under Sec 372, of the Indian Succession Act, for grant of Succession Certificate in respect of amount, of late Sri Swaminathan @ Saminathan and Smt.Late pattammal who died on 17/05/2009 at Bangalore.

Be it known that No caveat has been entered and the said petition is posted for hearing on 30/11/2009 at 11'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

1. Ashraya Deposit Canara Bank 2,54,435
2. Ashraya Deposit Canara Bank 54,257
3. Ashraya Deposit Canara Bank 12,718

Given under my hand and the seal of the Court, this the 30th day of October 2009

By Order of the Court
Assistant Registrar,
City Civil Court, Mayo Hall Unit, Bangalore.

P.D. 131

**FORM - IV**
**(See Rule 12)**
**NOTICE**

It is hereby notified that the undersigned has changed his/her name from **BASAPPA. GOLLALAPPA. HARIJAN** to **BASAVARAJ. GOLLALAPPA. PHATTEPUR**

P.D. 174 **BASAPPA. GOLLALAPPA. HARIJAN**

**FORM - IV**
**(See Rule 12)**
**NOTICE**

It is hereby notified that the undersigned has changed his/her name from **BHEEMAPPA. YAMANAPPA. HOLER** to **BHEEMAPPA. YAMANAPPA. SOMANAL**

P.D. 175 **BHEEMAPPA. YAMANAPPA. HOLER**

**FORM - IV**
**(See Rule 12)**
**NOTICE**

It is hereby notified that the undersigned has changed his/her name from **PRAKASH** to **A.PRAKASH**

P.D. 176 **PRAKASH**

**ಉಡುಪಿ ಜಿಲ್ಲಾ ಪಂಚಾಯತ್**

**ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರ ಕಛೇರಿ, ಜಿಲ್ಲಾ ಪಂಚಾಯತ್, ಉಡುಪಿ**

**ಅಧಿಸೂಚನೆ**

**ಸಂಖ್ಯೆ:ಜಿಪಂಉ:ಆಡಳಿತ:177:2003–04, ದಿನಾಂಕ: 13ನೇ ಆಗಸ್ಟ್ 2009**

**ವಿಷಯ:** ಗ್ರಾಮ ಪಂಚಾಯತ್ ಕಾರ್ಯದರ್ಶಿ ಗ್ರೇಡ್–1 ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಕರ್ನಾಟಕ ರಾಜ್ಯ ಪತ್ರದ ಪ್ರಕಟಣೆ ದಿನಾಂಕ: 2.10.2003.
2. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ದಿನಾಂಕ: 19.06.2009.

ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್/13/ಎಸ್‌ಬಿಸಿ/2001 ದಿನಾಂಕ: 21.11.2001 ರಂತೆ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಜಿಪಂಉ/ಆಡಳಿತ/177/2003–04 ದಿನಾಂಕ: 26.08.2003 ರಲ್ಲಿ ಗ್ರಾಮ ಪಂಚಾಯತ್ ಕಾರ್ಯದರ್ಶಿ ಗ್ರೇಡ್–1 ಮತ್ತು ಗ್ರೇಡ್–2 ಹುದ್ದೆಯ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಸದ್ರಿ ಆಯ್ಕೆ ಪಟ್ಟಿಯಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾದ ಅರ್ಜಿ ಸಂಖ್ಯೆ: 4765/2003ಕ್ಕೆ ಸಂಬಂಧಿಸಿದಂತೆ ನೀಡಿದ ಮಧ್ಯಂತರ ಆದೇಶದಂತೆ ದಾವೆಯು ತೀರ್ಮಾನವಾಗುವ ತನಕ ಆಯ್ಕೆ ಪಟ್ಟಿಯ ಕ್ರ.ಸಂ. 2 ರಲ್ಲಿ ನಮೂದಿಸಿದ ಶ್ರೀ ದಯಾನಂದ ಹಣಮಾಕರ, ಬಿನ್ ಶಿವಪ್ಪ ಹಣಮಾಕರ, ಅಂಚೆ: ಬಿಜ್ಜರಗಿ, ಬಿಜಾಪುರ ಜಿಲ್ಲೆ ಇವರ ಆಯ್ಕೆಯನ್ನು ತಡೆಹಿಡಿಯಲಾಗಿತ್ತು.

ಪ್ರಸ್ತುತ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶ ದಿನಾಂಕ: 19.06.2009 ರಲ್ಲಿ ನೀಡಿದ ತೀರ್ಪಿನಂತೆ ಕೆ.ಎ.ಟಿ. ಅರ್ಜಿ ಸಂಖ್ಯೆ: 4765/2003 ನ್ನು ವಜಾಗೊಳಿಸಲಾಗಿರುತ್ತದೆ. ಆದ್ದರಿಂದ ಆಯ್ಕೆ ಪಟ್ಟಿಯ ಕ್ರ.ಸಂ. 2 ರಲ್ಲಿ ನಮೂದಿಸಿದ ಶ್ರೀ ದಯಾನಂದ ಹಣಮಾಕರ, ಬಿನ್ ಶಿವಪ್ಪ ಹಣಮಾಕರ, ಅಂಚೆ: ಬಿಜ್ಜರಗಿ, ಬಿಜಾಪುರ ಜಿಲ್ಲೆ ಇವರನ್ನು ಗ್ರಾಮ ಪಂಚಾಯತ್ ಕಾರ್ಯದರ್ಶಿ ಗ್ರೇಡ್–1 ಹುದ್ದೆಗೆ ಆಯ್ಕೆ ಮಾಡಲಾಗಿದೆ. ಅಭ್ಯರ್ಥಿಯು ನೇಮಕಾತಿ ಆದೇಶದಲ್ಲಿ ನಿಗದಿಪಡಿಸಿದ ದಿವಸದೊಳಗೆ ಸಂಬಂಧಪಟ್ಟ ಮೂಲ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೇ ಕರ್ತವ್ಯಕ್ಕೆ ಹಾಜರಾಗದೇ ಇದ್ದಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 19.06.2009 ರಲ್ಲಿ ನೀಡಿರುವ ಆದೇಶದಂತೆ ನಿಯಮಾನುಸಾರ ಮುಂದಿನ ಕ್ರಮ ಜರುಗಿಸಲಾಗುವುದು.

ಮುಖ್ಯ ಕಾರ್ಯನಿರ್ವಹಣಾಧಿಕಾರಿ,
ಜಿಲ್ಲಾ ಪಂಚಾಯತ್, ಉಡುಪಿ.

ಪಿ.ಡಿ. 127

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಇಡಿ 210 ಡಿಸಿಇ 2008(8), ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009**

ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದಿಂದ ಅರ್ಜಿಗಳನ್ನು ಆಹ್ವಾನಿಸಿ ನೇಮಕಾತಿ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದುದು ಸರಿಯಷ್ಟೆ. ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಪ್ರಕ್ರಿಯೆಯನ್ನು ಪೂರೈಸಿ ತದನಂತರ ಮತ್ತು ಆಯೋಗವು ಸಲ್ಲಿಸಿದ ಆಯ್ಕೆ ಪಟ್ಟಿಯಂತೆ ಈ ಕೆಳಕಂಡ ಅಭ್ಯರ್ಥಿಗಳನ್ನು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ವಿವಿಧ ವಿಷಯಗಳ ಉಪನ್ಯಾಸಕರ ಹುದ್ದೆಗಳಿಗೆ 02 ವರ್ಷಗಳ ಪರಿವೀಕ್ಷಣಾ ಅವಧಿಯ ಮೇರೆಗೆ ವೇತನ ಶ್ರೇಣಿ ರೂ.8000–275–13500 ರಲ್ಲಿ ಈ ಮೂಲಕ ನೇಮಕಾತಿ ಮಾಡಲಾಗಿದೆ.

**ಸಮಾಜಶಾಸ್ತ್ರ**

| ಕ್ರಮ ಸಂಖ್ಯೆ | KPSC ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil. |
| 1 | 85 | ದಿನೇಶಪ್ಪ ಸಿಂಗಪುರ, ಕನ್ನೇಶ್ವರ, ಕುಸನೂರು ಪೋಸ್ಟ್, ಹಾನಗಲ್ ತಾ, ಹಾವೇರಿ ಜಿಲ್ಲೆ–581120 | | | Ph.D. | M.Phil-KAR UNI |
| 2 | 177 | ರುಕ್ಸಾನ ಬಾದಶಹ ಶೇಖ, ಮು:ಕಗ್ವಾಡ, ತಾ: ಅಥಣಿ, ಬೆಳಗಾಂ ಜಿಲ್ಲೆ–591223 | | | | M.Phil.-Shivaji Uni., Kollapur June 2004 |

**ರಾಜ್ಯಶಾಸ್ತ್ರ**

| | | | | | | |
|---|---|---|---|---|---|---|
| 3 | 104 | ಪ್ರಭುರಾಜ ಕ್ಯಾರಕೊಪ್ಪ, ಮು:ಪೋಸ್ಟ್: ಮುಗನೂರು, ತಾ: ನರಗುಂದ, ಗದಗ ಜಿಲ್ಲೆ–582207 | | | | M.Phil-Kar.Uni |

| ಕ್ರಮ ಸಂಖ್ಯೆ | KPSC ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil. |
| 4 | 148 | ನಾಗರತ್ನ ಕುರ್ಡೇಕರ, ಕೆ.ಹೆಚ್.ಬಿ. ಕಾಲೋನಿ, ಮನೆ ನಂ.39, ಸುಭಾಸ ನಗರ, ಕುಸುಗಲ್ ರಸ್ತೆ, ಕೇಶವನಗರ, ಹುಬ್ಬಳ್ಳಿ, ಧಾರವಾಡ–580023 | | | | M.Phil-Kar.Uni |

**ವಾಣಿಜ್ಯಶಾಸ್ತ್ರ**

| | | | | | | |
|---|---|---|---|---|---|---|
| 5 | 120 | ರೂಪಾಲಿ ತುಕಾರಾಂ ರಾಥೋಡ್, 198/2/111/109, ಬಿರ್ಲಾ ಏರಿಯಾ, ವಾಡಿ ತಾ: ಗುಲ್ಬರ್ಗ ಜಿಲ್ಲೆ–585225 | | | | M.Phil-Gul |
| 6 | 178 | ಕಲ್ಪನಾ ಎ ಕುಡಾಳಕರ D/o ಎ.ಜಿ.ಕುಡಾಳಕರ, ಎಂ.ಎಂ.ಟಿ.ಸಿ. ಕಾಲೋನಿ, ಎಂ.ಜೆ.ನಗರ, ಹೊಸಪೇಟೆ, ಬಳ್ಳಾರಿ–583203 | NET | SLET | | |
| 7 | 308 | ಸಫೀಯಾ ಬೇಗಂ C/o ಸೈಯದ್ ಮುಜ್ತಬಾ ಹುಸೇನಿ, ಬಿ.ಬಿ.ರಜಾ ಮಹಿಳಾ ಪದವಿ ಕಾಲೇಜು, ಖಾಜಾ ಕಾಲೋನಿ, ಗುಲ್ಬರ್ಗಾ–585104 | | | | M.Phil-Alag Uni Jan 08 |
| 8 | 370 | ಪ್ರಕಾಶ್ ಲಕ್ಷಟ್ಟಿ, ಚಿಕ್ಕೋಡಿ ಬಿಲ್ಡಿಂಗ್ ಹತ್ತಿರ, ಪ್ಲಾಟ್ ನಂ.188/17, ಬಸವನಗರ, ಗೋಕಾಕ್ ಮೋ&ತಾ: ಬೆಳಗಾಂ ಜಿಲ್ಲೆ–591307 | | | | M.Phil-Alag Uni Feb 08 (ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸಲ್ಲಿಸಿರುವರು. ಮೂಲ ಪ್ರತಿಯನ್ನು ಸಲ್ಲಿಸಿದ ನಂತರ ಸ್ಥಳನಿಯುಕ್ತಿ ಆದೇಶ ನೀಡುವುದು) |
| 9 | 377 | ಶೋಭಾರಾಣಿ ಹೆಚ್. ದುಬೈ ಹೌಸ್ ಹತ್ತಿರ, ರವೀಂದ್ರನಾಥಟಾಗೂರ್ ರಸ್ತೆ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ–573116 | NET | | | |
| 10 | 400 | ವಸಂತ್ ಮುಂಡರಗಿ C/o ಎಂ.ಹೆಚ್. ಮುಂಡರಗಿ, ಯು.ಸಿ.ಬಿ.ನಗರ. ಪ್ಲಾಟ್ ನಂ.69, ಹಳಿಯಾಳ ರಸ್ತೆ, ಧಾರವಾಡ–580007 | | | Ph.D | |
| 11 | 415 | ಹನುಮಂತರಾಯುಡು, #663, 1ನೇ ಮುಖ್ಯರಸ್ತೆ, ಡಿ ಬ್ಲಾಕ್, 2ನೇ ಹಂತ, ರಾಜಾಜಿನಗರ, ಬೆಂಗಳೂರು–560010 | | | | M.Phil-Mad Kam DIS Jan 08 |
| 12 | 421 | ಉಮಾಪತಿ ಎಸ್ C/o ಕೆ.ಶಿವಾಜಿ ಬೆಳಲಮಕ್ಕಿ ಸಾಗರ, ಶಿವಮೊಗ್ಗ ಜಿಲ್ಲೆ–577401 | | | | M.Phil-Mad Kam DIS Feb 08 |
| 13 | 422 | ಗಾಯತ್ರಿ ದಾದ್ಮಿ C/o ಎನ್.ಬಿ.ಪೈಲ, ಹೆಡ್ ಪೋಸ್ಟ್ ಆಫೀಸ್ ಎದುರು, ಹುನುಗುಂದ ಪೋಸ್ಟ್, ಬಾಗಲಕೋಟೆ–587118 | | | | M.Phil-Alag Uni Feb 2008 |

| ಕ್ರಮ ಸಂಖ್ಯೆ | KPSC ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil. |
| 14 | 436 | ಪ್ರವೀಣ್ ಶಿಂಧೆ, ಶ್ರೀ ನವರತ್ನ ನಿಲಯ, ಗಾಂಧೀ ಚೌಕ್, ಶಿವಾಜಿ ರಸ್ತೆ, ಧಾರವಾಡ–580001 | | | | M.Phil-Shivaji Uni Kollapur Nov 1998 |
| 15 | 463 | ಭೀಮಶ್ಯಾ ಬಿನ್: ಕಲ್ಲಪ್ಪ ಬರಗಲಿ, ಕುಶನೂರು ಪೋಸ್ಟ್, ಜಿ.ಯು.ಜಿ. ಗುಲ್ಬರ್ಗಾ ಜಿಲ್ಲೆ–585106 | | | | M.Phil-Gul |
| 16 | 481 | ಪ್ರಕಾಶ S/o ರಂಗಸ್ವಾಮಿ, ಕೋಟೆಕೆರೆ (ಪೋ & ವಿ), ಬೇಗೂರು ಹೋಬಳಿ, ಗುಂಡ್ಲುಪೇಟೆ ತಾ: ಚಾಮರಾಜನಗರ ಜಿಲ್ಲೆ–571109 | | SLET | | |
| 17 | 512 | ಸುಭಾಷ್ ಮಾರುತಿ ಕಚಕಾರಟ್ಟಿ C/o ಬಿ.ಎನ್. ಶಿವಕುಮಾರ್, ನೆಹರು ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್, 1643–ಎ, 11 ಎ ಕ್ರಾಸ್ ರಸ್ತೆ, ಮರಿಯಪ್ಪನಪಾಳ್ಯ, ಪ್ರಕಾಶನಗರ, ರಾಜಾಜಿನಗರ, ಬೆಂಗಳೂರು–560021 | | | Ph.D | |
| 18 | 514 | ರವಿಕುಮಾರ್, ಹೆಚ್‌ಎ ಜಿಲ್ಲಾ ಖಜಾನೆ ಕಛೇರಿ, ಜಿಲ್ಲಾ ಕಛೇರಿ ಕಾಂಪ್ಲೆಕ್ಸ್, ಚಾಮರಾಜನಗರ–571313 | | SLET | | |

**ಅರ್ಥಶಾಸ್ತ್ರ**

| | | | | | | |
|---|---|---|---|---|---|---|
| 19 | 179 | ರೂಪಾ ಎಂ.ಎನ್. D/o ನಂಜಯ್ಯ, ಮಾವುಕೆರೆ, ದೇವಲಾಪುರ [ಪೋ], ತುಮಕೂರು ತಾ: 572132 | | | | M.Phil-Alag Uni-DIS-Dec.2007 |
| 20 | 182 | ಶಿವಲಿಂಗಮ್ಮ D/o ಗುಂಜಲಪ್ಪ, ಮುಸ್ಲಿಯಾನೂರ್, ಗುಂಜನೂರು ಪೋಸ್ಟ್, ಯಾದಗಿರಿ ತಾ: ಗುಲ್ಬರ್ಗಾ ಜಿಲ್ಲೆ–585321 | | | Ph.D. | 182 |

**ಭೌತಶಾಸ್ತ್ರ**

| | | | | | | |
|---|---|---|---|---|---|---|
| 21 | 161 | ಶ್ರೀಮತಿ ಪಾಟೀಲ್ ಪ್ರೀತಿ ಮಲ್ಲಿಕಾರ್ಜುನಗೌಂಡ C/o ಟಿ.ಬಸವರಾಜ್, ಆಂಜನೇಯ ಕೃಪಾ, ತುಂಗಭದ್ರಾ ಲೇಔಟ್, 3ನೇ ಕ್ರಾಸ್, ಕೆ.ಯು.ಡಿ. ರಸ್ತೆ, ಧಾರವಾಡ–580001 | | | | M.Phil-Alagappa Uni. Feb.2008 |
| 22 | 173 | ಶ್ರೀ ಬಸವೇಗೌಡ ಹೆಚ್.ಡಿ. ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪಿ.ಯು.ಕಾಲೇಜು, ಹಿರಿಯೂರು, ಚಿತ್ರದುರ್ಗ ಜಿಲ್ಲೆ–572143 | | | | M.Phil. – Bng (ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಸಲ್ಲಿಸಿರುವರು. ಮೂಲ ಪ್ರತಿಯನ್ನು ಸಲ್ಲಿಸಿದ ನಂತರ ಸ್ಥಳನಿಯುಕ್ತಿ ಆದೇಶ ನೀಡುವುದು) |

| ಕ್ರಮ ಸಂಖ್ಯೆ | KPSC ಕ್ರ. ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಸ್ನಾತಕೋತ್ತರ ಪದವಿಯ ಜೊತೆಗೆ ಪಡೆದುಕೊಂಡಿರುವ ವಿದ್ಯಾರ್ಹತೆ | | | |
|---|---|---|---|---|---|---|
| | | | NET | SLET | Ph.D. | M.Phil. |
| | | **ಇತಿಹಾಸ** | | | | |
| 23 | 135 | ಸುರೇಶ ದೊಡ್ಡಮನಿ C/o ಡಿ.ಜಿ. ದೊಡ್ಡಮನಿ, 1ನೇ ಮಹಡಿ, ಪುರೋಹಿತನಗರ, ಕಲಘಟಗಿ ರಸ್ತೆ, ಧಾರವಾಡ–580002 | | | Ph.D. | M.Phil.-Kar Uni |
| 24 | 168 | ಕವಿತಾ ಚಾರ್ಲಸ್ ಮಕ್ವಾನ್ ಪ್ಲಾಟ್ ನಂ–94, ದಫೋದಿಲ್ ವಿಲ್ಲಾ, ಭಾಗ್ಯಲಕ್ಷ್ಮಿ ಲೇಔಟ್, ಪ್ರಶಾಂತ ನಗರ ಬಿ. ಗುಲ್ಬರ್ಗಾ–585104 | | | Ph.D. | M.Phil.-GUL |
| 25 | 176 | ಡಾ: ಕೆ.ಎಂ. ಕೋಮಲ, ನಂ.171, ಪಾರ್ವತಿ ಕೃಪ, ಗಾಯತ್ರಿ ಪುರಂ, 2ನೇ ಸ್ಟೇಜ್, ಮೈಸೂರು–570019 | | | Ph.D. | |
| | | **ಗಣಿತಶಾಸ್ತ್ರ** | | | | |
| 26 | 185 | ಬದರುನ್ನಿಸಾ ಬೇಗಂ D/o ಮಕ್ಬೂಲ್ ಅಹ್ಮದ್, ನಂ.7–990/7ಸಿ, ನಯಾ ಮೊಹಲ್ಲಾ, ಗುಲ್ಬರ್ಗಾ ಜಿಲ್ಲೆ–585104 | | | | M.Phil.- Gul |
| | | **ಗೃಹವಿಜ್ಞಾನ** | | | | |
| 27 | 15 | ಬೆಳಿಂದ ಲೋಪೇಜ್, ನಂ.14, ಲಿಟ್ಲ್ ನೆಸ್ಟ, 1ನೇ ಕ್ರಾಸ್, ಯುಬಿವಿ ಬ್ಲಾಕ್, ಜೆ.ಸಿ. ನಗರ, ಬೆಂಗಳೂರು–560006 | | | Ph.D. | |

ಮೇಲ್ಕಂಡ ನೇಮಕಾತಿಯು ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ಈ ಅಧಿಸೂಚನೆಯಲ್ಲಿರುವ ಅಭ್ಯರ್ಥಿಗಳಿಗೆ ಕಾಲೇಜು ಶಿಕ್ಷಣ ಆಯುಕ್ತರು ಸ್ಥಳನಿಯುಕ್ತಿ ಆದೇಶ ನೀಡುವ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗ ಆಯ್ಕೆ ಮಾಡಿರುವ ಜ್ಯೇಷ್ಠತೆಯಂತೆಯೇ ಪರಿಗಣಿಸಿ ಕೌನ್ಸಿಲಿಂಗ್ ಮಾಡುವುದು. ಈ ಸಂಬಂಧ ಆಯುಕ್ತರ ಕಾರ್ಯಾಲಯದವರು ಕೌನ್ಸಿಲಿಂಗ್ ದಿನಾಂಕವನ್ನು ತಿಳಿಸುತ್ತಾರೆ.
2. ನೇಮಕಾತಿಯು ತಾತ್ಕಾಲಿಕವಾಗಿದ್ದು ಆಗ್ಗಿಂದಾಗ್ಗೆ ಈ ಸಂಬಂಧ ವಿಧಿಸುವ ಸೇವಾ ಷರತ್ತುಗಳಿಗೆ ಒಳಪಟ್ಟಿರುತ್ತದೆ.
3. ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ನಡತೆ, ಮೀಸಲಾತಿಗೆ ಸಂಬಂಧಿಸಿದ ಮತ್ತಿತರ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಪ್ರಥಮವಾಗಿ ಆಯುಕ್ತರ ಮುಂದೆ ಹಾಜರುಪಡಿಸಿ ಪರಿಶೀಲನೆಯ ನಂತರ ಈ ದಾಖಲಾತಿಗಳನ್ನು ಹಾಜರಾಗುವ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು.
4. ಕರ್ನಾಟಕ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ (1974)ರ ಅಡಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆಯನ್ನು ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣರಾಗತಕ್ಕದ್ದು.
5. ಪಿಹೆಚ್.ಡಿ / ಎನ್.ಇ.ಟಿ / ಎಸ್.ಎಲ್.ಇ.ಟಿ ಪರೀಕ್ಷೆ ತೇರ್ಗಡೆ ಹೊಂದಿದ್ದವರು ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ, ಭಾಗ–1 ಮತ್ತು ಭಾಗ–2 ಇದನ್ನು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆಯಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
6. ಪಿಹೆಚ್.ಡಿ/ ಎನ್.ಇ.ಟಿ / ಎಸ್.ಎಲ್.ಇ.ಟಿ ಪದವಿ ಇಲ್ಲದವರು ಅಂದರೆ ಕೇವಲ ಎಂ.ಫಿಲ್ ಪಾಸು ಮಾಡಿರುವವರು (ದೂರ ಶಿಕ್ಷಣ ಮುಖೇನ ಅಥವಾ ಸಾಂಪ್ರದಾಯಿಕ ಶಿಕ್ಷಣದ ಮುಖೇನ) ಪರಿವೀಕ್ಷಣಾ ಅವಧಿಯಲ್ಲಿ ಎನ್.ಇ.ಟಿ/ಎಸ್.ಎಲ್.ಇ.ಟಿ, / ಪಿ.ಹೆಚ್.ಡಿ.ಯಲ್ಲಿ ಮೇಲ್ಕಾಣಿಸಿದ ಇಲಾಖಾ ಪರೀಕ್ಷೆಗಳ ಜೊತೆಗೆ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು. ಇಲ್ಲವಾದಲ್ಲಿ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಾಗುವುದಿಲ್ಲ.
7. ಉಪನ್ಯಾಸಕ ಹುದ್ದೆಗೆ ಅವಶ್ಯಕತೆ ಇರುವ ಓರಿಯೆಂಟೇಷನ್ ಮತ್ತು ರಿಫ್ರೆಷರ್ ಕೋರ್ಸ್ ತರಬೇತಿಯನ್ನು ಪೂರೈಸತಕ್ಕದ್ದು.
8. ಅಭ್ಯರ್ಥಿಗಳ ಜೇಷ್ಠತೆಯು ಕರ್ನಾಟಕ ಲೋಕ ಸೇವಾ ಆಯೋಗದ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಅಧಿಸೂಚನೆಯನ್ವಯ ಇರತಕ್ಕದ್ದು.

9. ಅಭ್ಯರ್ಥಿಗಳ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ (ಸಿವಿಲ್) ಸಂಖ್ಯೆ:232/99ರ ಅಂತಿಮ ತೀರ್ಮಾನಕ್ಕೆ ಬದ್ದವಾಗಿರುತ್ತದೆ.
10. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಈ ಕುರಿತು ಬಾಕಿ ಇರುವ ಅರ್ಜಿ ಸಂಖ್ಯೆ: 4463/2008, 5278, 5322, 5268, 5338/2008 ಮತ್ತು 43/2009ರ ಮೇಲೆ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೆ ಬದ್ದರಾಗಿರತಕ್ಕದ್ದು. ಹಾಗೂ ಈ ತೀರ್ಪುಗಳ ಕುರಿತಾದ ಉಚ್ಚ ನ್ಯಾಯಾಲಯದ ಮೇಲ್ಮನವಿ ತೀರ್ಪಿಗೆ ಬದ್ದರಾಗಿರತಕ್ಕದ್ದು.
11. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವರ್ಗಾವಣೆ ಪರಿಗಣಿಸಲಾಗುವುದಿಲ್ಲ.
12. ಈ ಅಧಿಸೂಚನೆಯಲ್ಲಿ ಕಾಣಿಸಿರುವ ಅಭ್ಯರ್ಥಿಗಳ ಸಂಬಳ, ಭತ್ಯೆ ಇತ್ಯಾದಿ ಇವುಗಳು ಸ್ಥಳನಿಯುಕ್ತಿ ಆದೇಶ ಹೊರಡಿಸಿ ಅದರಂತೆ ಆಯಾ ಸ್ಥಳಗಳಲ್ಲಿ ಹಾಜರಾದ ದಿನಾಂಕದಿಂದ ಲಭ್ಯವಾಗುತ್ತದೆ.

ಅಭ್ಯರ್ಥಿಗಳು ಅಂದರೆ ಪಿ.ಹೆಚ್‌ಡಿ/ಎನ್.ಇ.ಟಿ/ಎಸ್.ಎಲ್.ಇ.ಟಿ ಪದವಿ ಹೊಂದಿರುವವರು ಕನ್ನಡ ಭಾಷೆ, ಅಕೌಂಟ್ಸ್ ಹೈಯರ್ ಹಾಗೂ ಜನರಲ್ ಲಾ ಭಾಗ–1 ಮತ್ತು ಭಾಗ–2 ಇವುಗಳಲ್ಲಿ ತೇರ್ಗಡೆ ಹೊಂದಿದ ನಂತರವೆ ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲು ಅರ್ಹರಿರುತ್ತಾರೆ; ಅಂತೆಯೇ ಕೇವಲ ಎಂ.ಫಿಲ್ ಪದವಿ ಪಡೆದವರು ಈ ಇಲಾಖಾ ಪರೀಕ್ಷೆಗಳ ಜೊತೆಗೆ ಎನ್.ಇ.ಟಿ/ಎಸ್.ಎಲ್.ಇ.ಟಿ ಪರೀಕ್ಷೆಯಲ್ಲಿ ತೇರ್ಗಡೆಯಾದಲ್ಲಿ ಮಾತ್ರ ಪರಿವೀಕ್ಷಣಾ ಅವಧಿಯ ತೃಪ್ತಿಕರ ಘೋಷಣೆಗೆ ಅರ್ಹರಿರುತ್ತಾರೆ. ಈ ದಿಶೆಯಲ್ಲಿ ಲಗತ್ತಿಸಿರುವ ನಮೂನೆಯಲ್ಲಿ ಒಂದು ಮುಚ್ಚಳಿಕೆಯನ್ನು ಕೌನ್ಸಿಲಿಂಗ್ ಸಮಯದಲ್ಲಿ ಇವರು ತಪ್ಪದೇ 100 ರೂಪಾಯಿ ಛಾಪಾ ಕಾಗದದಲ್ಲಿ ಶಪಥಗ್ರಹಣ ಮಾಡಿ ಸಲ್ಲಿಸತಕ್ಕದ್ದು. ತಪ್ಪಿದ್ದಲ್ಲಿ ಅವರುಗಳು ಸ್ಥಳ ನಿಯೋಜನೆಗೆ ಅರ್ಹರಲ್ಲ ಮತ್ತು ಈ ನೇಮಕಾತಿ ಆದೇಶ ರದ್ದಾಗಿದೆಯೆಂದು ಭಾವಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ. (ಉನ್ನತ ಶಿಕ್ಷಣ)

## LETTER OF UNDERTAKING

I, Sri/Smt/Kum..................................................................................... son of/ daughter of wife of residing at........................................................................................ .................................................................., do hereby understand and undertake to comply with the following terms and conditions relating to my appointment as Lecturer in.................................pursuant to the recommendation made by the Karnataka Public Service Commission:-

(1) The scale of pay for which I have been appointed has been Rs.8,000 – 275 – 13,500 and the designation is Lecturer in.....................

(2) I have to pass the prescribed Kannada language examination and the departmental examinations, viz., Accounts Higher, General Part – I and Part – II, besides the orientation course and refresher course for the post of lecturer.

(3) I have to acquire Ph.D/NET/SLET and only thereafter I am entitled for declaration of period of probation as satisfactory i.e. after the completion of two years and after passing the above said examinations composed with satisfactory performance.

(4) As I have not acquired NET/SLET/Ph.D. through course work but only M.Phil, I do understand that for declaration of period of probation, apart from passing Kannada language examination, Accounts Higher, General Law Part-I and Part-II besides the orientation course and refresher course I have to acquire NET/SLET without fail. Failure to acquire NET/SLET will render me ineligible for satisfactory declaration of period of probation and claim further increment either in the scale of Rs.8,000 – 13,500 or in any revised scale or claim any revised designation.

(5) I undertake to relinquish my claim to the post of lecturer in...................due to any adverse court verdict treating M.Phil degree obtained through distance or traditional education mode as invalid.

Signature of the candidate

Witnesses:

1.

2.

P.R. 853